# ಜನಪದ ಹಾಲುಮತ ಮಹಾಕಾವ್ಯದ ವಿಶ್ಲೇಷಣೆ

(ಕನ್ನಡ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ನಿಬಂಧ)


ಮಾರ್ಗದರ್ಶಕರು :

**ಪ್ರೊ. ಎನ್. ತಮ್ಮಣ್ಣಗೌಡ,** ಎಂ.ಎ., ಎಂ.ಫಿಲ್.

ನಿವೃತ್ತ ಪ್ರಾಂಶುಪಾಲರು

ಎಲ್.ಐ.ಜಿ.-78, 4ನೇ ಹಂತ,

ಕುವೆಂಪುನಗರ, ಮೈಸೂರು.

ಸಂಶೋಧಕರು :

**ಸಿ. ನೀಲಕಂಠೇಗೌಡ**

ಎಂ.ಫಿಲ್. ಅಭ್ಯರ್ಥಿ

ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

ಕರ್ನಾಟಕ ಸಂಘ (ರಿ), ಮಂಡ್ಯ.





**ಕರ್ನಾಟಕ ಸಂಘ (ರಿ), ಮಂಡ್ಯ.**

**ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ**

(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

**2007-08**

# ಜನಪದ ಹಾಲುಮತ ಮಹಾಕಾವ್ಯದ ವಿಶ್ಲೇಷಣೆ

(ಕನ್ನಡ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ನಿಬಂಧ)

ಮಾರ್ಗದರ್ಶಕರು :

**ಪ್ರೊ. ಎನ್. ತಮ್ಮಣ್ಣಗೌಡ**, ಎಂ.ಎ., ಎಂ.ಫಿಲ್.

ನಿವೃತ್ತ ಪ್ರಾಂಶುಪಾಲರು

ಎಲ್.ಐ.ಜಿ.-78, 4ನೇ ಹಂತ,

ಕುವೆಂಪುನಗರ, ಮೈಸೂರು.

ಸಂಶೋಧಕರು :

**ಸಿ. ನೀಲಕಂಠೇಗೌಡ**

ಎಂ.ಫಿಲ್. ಅಭ್ಯರ್ಥಿ

ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

ಕರ್ನಾಟಕ ಸಂಘ (ರಿ), ಮಂಡ್ಯ.







**ಕರ್ನಾಟಕ ಸಂಘ (ರಿ), ಮಂಡ್ಯ.**

**ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ**

(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

**2007-08**

## ಮಾರ್ಗದರ್ಶಕರ ದೃಢೀಕರಣ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ 2007-08ನೇ ಸಾಲಿಗೆ ಕನ್ನಡ ಎಂ.ಫಿಲ್. ಅಭ್ಯರ್ಥಿಯಾಗಿ ಇವರು ಪ್ರವೇಶ ಪಡೆದಿರುತ್ತಾರೆ. ಎಂ.ಫಿಲ್. ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು "ಜನಪದ ಹಾಲುಮತ ಮಹಾಕಾವ್ಯದ ವಿಶ್ಲೇಷಣೆ" ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ನನ್ನ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತಾರೆ.

ಈ ನಿಬಂಧವನ್ನಾಗಲಿ, ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತಿದ್ದೇನೆ. ಕನ್ನಡ ವಿಶ್ವವಿದ್ಯಾನಿಲಯವು ನೀಡುವ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಒಪ್ಪಿಸಿರುತ್ತಾರೆ.

[signature]

ಪ್ರೊ. ಎನ್. ತಮ್ಮಣ್ಣಗೌಡ ಎಂ.ಎ., ಎಂ.ಫಿಲ್.
ನಿವೃತ್ತ ಪ್ರಾಂಶುಪಾಲರು
ಎಲ್ಐಜಿ78, 4ನೇ ಹಂತ,
ಕುವೆಂಪುನಗರ, ಮೈಸೂರು.

ದಿನಾಂಕ : 3·10·2008
ಸ್ಥಳ : ಮಂಡ್ಯ

## ಅಭ್ಯರ್ಥಿಯ ದೃಢೀಕರಣ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ 2007-08ನೇ ಸಾಲಿಗೆ ಕನ್ನಡ ಎಂ.ಫಿಲ್. ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್. ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು "ಜನಪದ ಹಾಲುಮತ ಮಹಾಕಾವ್ಯದ ವಿಶ್ಲೇಷಣೆ" ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಪ್ರೊ. ಎನ್. ತಮ್ಮಣ್ಣಗೌಡ ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ, ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತಿದ್ದೇನೆ. ಕನ್ನಡ ವಿಶ್ವವಿದ್ಯಾನಿಲಯವು ನೀಡುವ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ಸಿ. ನೀಲಕಂಠೇಗೌಡ
ಎಂ.ಫಿಲ್. ಅಭ್ಯರ್ಥಿ
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
ಕರ್ನಾಟಕ ಸಂಘ(ರಿ), ಮಂಡ್ಯ.

ದಿನಾಂಕ : 4·10·2008
ಸ್ಥಳ : ಮಂಡ್ಯ

## ಪರಿವಿಡಿ

# ಅಧ್ಯಾಯ - ೧

## ಉದ್ದೇಶ ಮತ್ತು ವ್ಯಾಪ್ತಿ

ಒಂದು ಭಾಷೆಯಲ್ಲಿ ಜನಸಮುದಾಯ ಮೌಖಿಕ ಪರಂಪರೆಯಲ್ಲಿ ಕಟ್ಟಿ ಬೆಳೆಸಿಕೊಂಡು ಬಂದಿರುವ ಸಾಹಿತ್ಯವೇ ಜನಪದ ಸಾಹಿತ್ಯವಾಗಿದೆ. ವ್ಯಕ್ತಿಯೊಬ್ಬರ ಪ್ರತಿಭೆಯಿಂದ ಹುಟ್ಟಿದರೂ ಸಮಷ್ಟಿಯ ಮುದ್ರೆ ಪಡೆದು ಪುನಃ ಸೃಷ್ಟಿಗೊಂಡು ಕಂಠಸ್ಥ ಪರಂಪರೆಯಲ್ಲಿ ಪೀಳಿಗೆಯಿಂದ ಪೀಳಿಗೆಗೆ ಹರಿದು ಬಂದ ಈ ಜನಪದ ಸಾಹಿತ್ಯವು ಜಗತ್ತಿನ ಎಲ್ಲಾ ಭಾಷೆಗಳಲ್ಲಿ ಇರುವಂತೆ ಕನ್ನಡದಲ್ಲಿಯೂ ಸಮೃದ್ಧವಾಗಿ ಸೃಷ್ಟಿಗೊಂಡು ಉಳಿದು ಬೆಳೆದು ಬಂದಿದೆ.

ಒಂದು ರಾಷ್ಟ್ರದ ಸಾಂಸ್ಕೃತಿಕವಾದ ಬೆಳವಣಿಗೆಯನ್ನು ಹಾಗೂ ಬದುಕಿನ ಎಲ್ಲ ಮಜಲುಗಳನ್ನು ಅಲ್ಲಿನ ಜನಪದ ಸಾಹಿತ್ಯ ಅಭಿವ್ಯಕ್ತಿಪಡಿಸುತ್ತದೆ. ಈ ದೃಷ್ಟಿಯಲ್ಲಿ ಫಿನ್‌ಲೆಂಡಿನ ಕಲೆವಾಲವನ್ನು ಆ ರಾಷ್ಟ್ರದ ಜನಪದ ಮಹಾಕಾವ್ಯವೆಂದು ಕರೆಯಲಾಗಿದೆ. ಶಿಷ್ಟ ಸಾಹಿತ್ಯ ಪರಂಪರೆಯಲ್ಲಿ ರಾಮಾಯಣ ಮತ್ತು ಮಹಾಭಾರತಗಳು ಭಾರತದ ಮಹಾಕಾವ್ಯಗಳಾಗಿ ಪ್ರಸಿದ್ಧಿ ಹೊಂದಿವೆ. ಇವು ಒಂದು ಹಂತದಲ್ಲಿ ಮೌಖಿಕ ಪರಂಪರೆಯಲ್ಲಿದ್ದು ತದನಂತರದಲ್ಲಿ ಲಿಖಿತ ಪರಂಪರೆಗೆ ಒಳಗಾಗಿವೆಯೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಈ ಹಿನ್ನೆಲೆಯಲ್ಲಿ ಬಿ.ಎಂ.ಶ್ರೀ. ಅವರು ಹೇಳಿರುವ 'ಜನವಾಣಿಬೇರು ಕವಿವಾಣಿ ಹೂವು' ಎಂಬ ಮಾತು ಜನಪದ ಸಾಹಿತ್ಯ ಮತ್ತು ಶಿಷ್ಟ ಸಾಹಿತ್ಯದ ಸಂಬಂಧದ ಗಾಢತೆಯನ್ನು ಹೇಳುತ್ತದೆ.ಮಹಾಕಾವ್ಯ ಪರಂಪರೆ ಶಿಷ್ಟ ಸಾಹಿತ್ಯ ಕ್ಷೇತ್ರದಲ್ಲಿ ಕಂಡು ಬರುವಂತೆಯೇ ಜನಪದ ಸಾಹಿತ್ಯ ಕ್ಷೇತ್ರದಲ್ಲಿಯೂ ಹುಟ್ಟಿಕೊಂಡಿದೆ. ಆದರೆ ಶಿಷ್ಟಕವಿಗಳು ತಮ್ಮ ಕೃತಿಗಳನ್ನು ಮಹಾಕಾವ್ಯ ಎಂದು ಕರೆದುಕೊಂಡಂತೆ ಜನಪದ ಕವಿಗಳು ತಾವು ಕಟ್ಟಿ ಹಾಡುವ ಯಾವುದೇ ಕಾವ್ಯಗಳನ್ನು ಮಹಾಕಾವ್ಯ ಎಂದು ಕರೆದುಕೊಂಡಿಲ್ಲ. ಜನಪದ ಮಹಾಕಾವ್ಯ ಎನ್ನುವುದು ಜಾನಪದ ಕ್ಷೇತ್ರದಲ್ಲಿ ತೀರಾ ಆಧುನಿಕ ಪರಿಕಲ್ಪನೆಯಾಗಿ ಬಳಕೆಗೊಳ್ಳುತ್ತಿದೆ. 'ಕಲೆವಾಲ'ದಂತೆಯೇ ಕನ್ನಡದಲ್ಲಿಯೂ ಜನಪದ ಮಹಾಕಾವ್ಯ ಪರಂಪರೆ ಬೆಳೆದು ಬಂದಿದೆ. ಮಹದೇಶ್ವರ ಕಾವ್ಯ, ಮಂಟೇಸ್ವಾಮಿ ಕಾವ್ಯ, ಜುಂಜಪ್ಪ, ಕುಮಾರರಾಮ, ಕೃಷ್ಣ ಗೊಲ್ಲರ ಕಾವ್ಯಗಳ ಸಾಲಿನಲ್ಲಿ ನಿಲ್ಲುವ ಮತ್ತೊಂದು ಜನಪದ ಮಹಾಕಾವ್ಯವೆಂದರೆ 'ಜನಪದ ಹಾಲುಮತ ಮಹಾಕಾವ್ಯ' ಕೂಡ ಆಗಿದೆ.

---

ಈ 'ಜನಪದ ಹಾಲುಮತ ಮಹಾಕಾವ್ಯ'ವು ಹದಿನಾಲ್ಕು ಅಧ್ಯಾಯಗಳಲ್ಲಿ ವಿಸ್ತೃತವಾಗಿ ಹಬ್ಬಿದೆ. ಡಾ|| ವೀರಣ್ಣ ದಂಡೆಯವರು ಇದನ್ನು ಸಂಪಾದಿಸಿ ಹೊರ ತಂದಿದ್ದಾರೆ. ಉತ್ತರ ಕರ್ನಾಟಕದ ಬೆಳಗಾಂ, ಬಳ್ಳಾರಿ ಮತ್ತು ಕಲಬುರ್ಗಿ ಜಿಲ್ಲೆಗಳಲ್ಲಿ ಹೆಚ್ಚು ಜನಪ್ರಿಯವಾಗಿರುವ, ಕೃಷಿ ಮತ್ತು ಹೈನುಗಾರಿಕೆ ಪ್ರಧಾನ ವೃತ್ತಿಯನ್ನೊಳಗೊಂಡಿರುವ ಕುರುಬ ಜನಾಂಗದ ದೇವತೆಗಳು, ಸಾಂಸ್ಕೃತಿಕ ನಾಯಕರು, ಅವರ ಧಾರ್ಮಿಕವಾದ ಮತ್ತು ಲೌಕಿಕವಾದ ಮೌಲ್ಯಗಳು, ಆ ಜನಾಂಗದ ಬದುಕಿನಲ್ಲಿ ಉಳಿದು ಬಂದಿರುವ ದಟ್ಟವಾದ ಅನುಭವಗಳು ಮೊದಲಾದವುಗಳನ್ನು ಈ ಕಾವ್ಯ ದಾಖಲಿಸುತ್ತದೆ. ಈ ಕಾವ್ಯವನ್ನು ಹಾಡಿದವರು ಕಲುಬುರ್ಗಿ ಜಿಲ್ಲೆಯ, ಶಹಪುರ ತಾಲ್ಲೂಕಿನ ಸೈದಾಪುರವೆಂಬ ಸಣ್ಣಹಳ್ಳಿಯ ಸಿದ್ದಪ್ಪ ಮೇಟಿ ಎಂಬಾತ. ಈತನು ತನ್ನ ಸಹ ಗಾಯಕರೊಡನೆ ಕೂಡಿ ೨೩,೨೫೦ ಸಾಲುಗಳುಳ್ಳ ಈ ಮಹಾಕಾವ್ಯವನ್ನು ಹಾಡಿರುವುದು ಆತನ ನೆನಪಿನ ಶಕ್ತಿಯ ಅಗಾಧತೆಯನ್ನು ಸೂಚಿಸುತ್ತದೆ. ಕೇಳುಗರಿಗೆ ಅಚ್ಚರಿ ಮೂಡಿಸುತ್ತದೆ.

ಕಲೆವಾಲ ಜನಪದ ಮಹಾಕಾವ್ಯವನ್ನು ಎಲಿಯಾಸ್ ಲೊನ್‌ರಾಟ್ ಎಂಬಾತ ಹಲವಾರು ಗಾಯಕರಿಂದ ಸಂಗ್ರಹಿಸಿದ ಕಥಾ ಪ್ರಸಂಗಗಳನ್ನು ಒಟ್ಟು ಜೋಡಿಸಿ ಸಂಪಾದಿಸಿ ಹೊರತಂದಿದ್ದಾನೆ ಆದರೆ ಮೌಖಿಕ ಪರಂಪರೆಯಲ್ಲಿನ ಹಾಲುಮತ ಮಹಾಕಾವ್ಯವನ್ನು ಏಕವ್ಯಕ್ತಿ ಹಾಡಿರುವುದು ಅಧ್ಯಯನದ ಕುತೂಹಲವನ್ನು ಮೂಡಿಸುತ್ತದೆ. ಆದುದರಿಂದ ನಾನು ಪ್ರಸ್ತುತ ಎಂ.ಫಿಲ್. ಪದವಿಯ ಪ್ರೌಢ ಪ್ರಬಂಧ ರಚನೆಗೆ ಈ ಮಹಾಕಾವ್ಯವನ್ನೇ ವಸ್ತುವಾಗಿ ಆಯ್ಕೆಮಾಡಿಕೊಳ್ಳಲು ಕಾರಣವಾಯಿತು.

ನನ್ನ ಪ್ರಬಂಧದ ವಿಷಯವು 'ಜನಪದ ಹಾಲುಮತ ಮಹಾಕಾವ್ಯದ ವಿಶ್ಲೇಷಣೆ' ಆಗಿದೆ. ಇದರಲ್ಲಿ ಜನಪದ ಮಹಾಕಾವ್ಯಗಳು, ಈ ಮಹಾಕಾವ್ಯದ ಕಥಾವಸ್ತು ಮತ್ತು ಸ್ವರೂಪವನ್ನು ಪರಿಚಯಿಸುವುದು, ಅಲ್ಲಿನ ಸೃಷ್ಟಿಪುರಾಣ, ಸಂಸ್ಕೃತಿ, ಆಚಾರ-ವಿಚಾರ, ಸಾಮಾಜಿಕ ಜೀವನ, ಪವಾಡಗಳು, ಭಾಷೆ ಮತ್ತು ಛಂದಸ್ಸುಗಳನ್ನು ಕುರಿತು ಸಂಗತಿಗಳನ್ನು ವಿಶ್ಲೇಷಿಸಲಾಗಿದೆ.

ಮಧುರ ಕವಿಯು ತನ್ನ ಧರ್ಮನಾಥ ಪುರಾಣದಲ್ಲಿ "ಪಂಡಿತರುಂ ವಿವಿಧ ಕಳಾ| ಮಂಡಿತರುಂ ಕೇಳ ತಕ್ಕ ಕೃತಿಯಂ ತಾಂ| ಕಂಡರ್ ಕೇಳ್ವೊಡೆ ಗೊರವರ| ದಂಡುಚಿಯೆ, ಬೀದಿವರೆಯ ಬೀರನ ಕಥೆಯೆ" ಎಂದು ಹೇಳಿರುವ ಮಾತು, ತನ್ನಂತಹ ಶಿಷ್ಟವರ್ಗಕ್ಕೆ ಇರುವ ಜನಪದ

---

ಸಾಹಿತ್ಯ ಮತ್ತು ಅದನ್ನು ಹಾಡುವ ವೃತ್ತಿಗಾಯಕರ ಬಗೆಗಿನ ತಿರಸ್ಕಾರವನ್ನು ಹೇಳುತ್ತದೆ. ಆದರೆ ಶಿಷ್ಟ ಸಾಹಿತ್ಯದ ಹಾಗೆ ಜನಪದ ಸಾಹಿತ್ಯ ಕೂಡ ಸಮೃದ್ಧವೂ, ಶ್ರೀಮಂತವೂ ಆದುದಾಗಿದೆ. ಶಿಷ್ಟ ಸಾಹಿತ್ಯದ ಮಹಾಕಾವ್ಯ ಪರಂಪರೆಯಂತೆ ಜನಪದ ಮಹಾಕಾವ್ಯ ಪರಂಪರೆಯೂ ಸತ್ವಪೂರ್ಣವಾದುದಾಗಿದೆ. ಎರಡರ ದೃಷ್ಟಿಯೂ ಸಾಮಾಜಿಕವಾಗಿ ಒಂದೇ ನೆಲೆಯದಾಗಿದೆ.

ಆದುದರಿಂದ ಈಗ ಹೊರಜಗತ್ತಿಗೆ ಪ್ರಕಟಗೊಂಡಿರುವ ಜನಪದ ಮಹಾಕಾವ್ಯಗಗಳನ್ನು ಕುರಿತ ಅಧ್ಯಯನ, ವಿಶ್ಲೇಷಣೆ, ಅವುಗಳ ಮಹತ್ವವನ್ನು ತಿಳಿಸಿಕೊಡುವ ಕಾರ್ಯ ಅತ್ಯಗತ್ಯವಾಗಿದೆ. ಈ ಹಿನ್ನೆಲೆಯಲ್ಲಿ ಹಾಲುಮತ ಮಹಾಕಾವ್ಯವನ್ನು ಅಧ್ಯಯನಕ್ಕೆ ಒಳಪಡಿಸಿ ಅದರ ಸತ್ವವನ್ನು ತಿಳಿಸಿಕೊಡುವುದು ಹೆಚ್ಚು ಪ್ರಸ್ತುತವೆನಿಸಿರುವುದರಿಂದ ನನ್ನ ಪ್ರಬಂಧಕ್ಕೆ ಈ ಮಹಾಕಾವ್ಯವನ್ನು ಆಯ್ಕೆ ಮಾಡಿಕೊಂಡಿರುವುದು ಸೂಕ್ತವೆಂದುಕೊಂಡಿದ್ದೇನೆ.

ಹಾಲುಮತ ಮಹಾಕಾವ್ಯವನ್ನು ಇತರ ಕನ್ನಡದ ಜನಪದ ಮಹಾಕಾವ್ಯಗಳ ಹಿನ್ನೆಲೆಯಲ್ಲಿ ವಿಶ್ಲೇಷಣೆ ಮಾಡಿ ಇದರ ಸ್ಥಾನ ನಿರ್ದೇಶ ಮಾಡುವುದು ಬಹಳ ಮುಖ್ಯವಾದ ಕೆಲಸವಾಗಿತ್ತು. ಆದರೆ ನನ್ನ ಪ್ರಬಂಧದ ಮಿತಿಯಲ್ಲಿ ಈ ಕಾರ್ಯ ಅಸಾಧ್ಯವಾಗಿರುವುದು ನನ್ನ ಅರಿವಿಗಿದೆ. ಅಲ್ಲದೆ ಕುರುಬ ಜನಾಂಗಕ್ಕೆ ಸಂಬಂಧಿಸಿದಂತೆ ಸಂಗ್ರಹಿಸಿ, ಸಂಪಾದಿಸಿ ಪ್ರಕಟಿಸಿರುವ ಇತರ ಜನಪದ ಕಾವ್ಯಗಳನ್ನು ಇಟ್ಟುಕೊಂಡು ತೌಲನಿಕ ಅಧ್ಯಯನಕ್ಕೆ ಒಳಪಡಿಸಿ ಅಲ್ಲಿನ ಸನ್ನಿವೇಶ ಮತ್ತು ಇತರ ಕಥಾಂಶದ ಬೆಳವಣಿಗೆಯನ್ನು ವಿಶ್ಲೇಷಣೆ ಮಾಡುವುದು ಅಗತ್ಯ ಎನಿಸುತ್ತದೆ. ಆಗ ಅದರ ಸ್ವರೂಪ ದೊಡ್ಡದಾಗಿ ಪಿಹೆಚ್.ಡಿ. ಮಹಾಪ್ರಬಂಧದ ವ್ಯಾಪ್ತಿಯನ್ನು ಪಡೆದುಕೊಳ್ಳುತ್ತದೆ. ಆದರೆ ಹಾಲುಮತ ಮಹಾಕಾವ್ಯದ ವಿಶ್ಲೇಷಣೆಯು ಈ ಪ್ರಬಂಧದ ಉದ್ದೇಶವಾಗಿರುವುದರಿಂದ ಹಾಗೂ ನನ್ನ ಪ್ರಬಂಧದ ಮಿತಿಯ ಹಿನ್ನೆಲೆಯಲ್ಲಿ ತೌಲನಿಕ ಅಧ್ಯಯನಕ್ಕೆ ಕೈ ಹಾಕಿಲ್ಲ. ಇದು ನನ್ನ ಪ್ರಬಂಧಕ್ಕಿರುವ ಮಿತಿಯೆಂಬುದನ್ನು ಅರಿತಿದ್ದೇನೆ.

# ಅಧ್ಯಾಯ - ೨

## ಜನಪದ ಮಹಾಕಾವ್ಯಗಳು

"ಜನವಾಣಿ ಬೇರು ಕವಿ ವಾಣಿ ಹೂವು" ಎಂದು ಬಿ. ಎಂ. ಶ್ರೀಯವರು ಹೇಳಿರುವ ಮಾತು ಜನಪದ ಸಾಹಿತ್ಯದ ಶ್ರೇಷ್ಠತೆ ಮತ್ತು ಪ್ರಾಮುಖ್ಯತೆಯನ್ನು ಹೇಳುತ್ತದೆ ಒಂದು ನಾಡಿನ, ರಾಷ್ಟ್ರದ ಸಾಂಸ್ಕೃತಿಕ ಅಸ್ಮಿತೆಯನ್ನು ಸ್ಥಾಪಿಸುವಲ್ಲಿ ಅಲ್ಲಿನ ಜನಪದ ಸಾಹಿತ್ಯ ಪ್ರಮುಖ ಪಾತ್ರ ವಹಿಸುತ್ತದೆ. ಒಂದು ಭಾಷೆಯ ಜನಪದ ಸಾಹಿತ್ಯವು ಆ ರಾಷ್ಟ್ರದ ಜೀವಂತವಾಣಿಯಾಗಿರುತ್ತದೆ.

"ಮಹಾಕಾವ್ಯ ಎಂಬ ಪದವನ್ನು Epic ಎನ್ನುವ ಇಂಗ್ಲೀಷಿನ ಪದಕ್ಕೆ ಸಂವಾದಿಯಾಗಿ ಬಳಸುತ್ತಿದ್ದೇವೆ. ಹೋಮರನ, ವರ್ಜಿಲನ, ಮಿಲ್ಟನನ, ಡಾಂಟೆಯ, ಕಾವ್ಯಗಳು; ರಾಮಾಯಣ, ಮಹಾಭಾರತ, ಅರವಿಂದರ. ಸಾವಿತ್ರಿ, ಕುವೆಂಪು ಅವರ ರಾಮಾಯಣ ದರ್ಶನಂ ಮೊದಲಾದುವನ್ನು ಮಹಾಕಾವ್ಯವೆಂದು ಕರೆಯುತ್ತೇವೆ. ಆದರೆ Epic ಎನ್ನುವ ಶಬ್ದವನ್ನು ಈ ಅರ್ಥದಲ್ಲಿ ಇಟ್ಟು ಕೊಂಡಾಗ ನಾವು ಜನಪದ ಕಾವ್ಯಕ್ಕೆ ಈ ಪರಿಭಾಷೆಯನ್ನು ಬಳಸುವುದು ಎಷ್ಟು ಸೂಕ್ತ ಎಂಬ ಚರ್ಚೆ ಇದೆ".[೧] ಮಹಾಕಾವ್ಯಗಳು ವೀರ ಕಾವ್ಯಗಳಾಗಿದ್ದು ಧರ್ಮದ ಗುರಿಯನ್ನು ಹೊಂದಿರುತ್ತವೆ. ಖಥಾನಾಯಕ ಪ್ರಮುಖವಾಗಿದ್ದು ರಾಷ್ಟ್ರೀಯ ಮೌಲ್ಯಗಳನ್ನು ಪ್ರತಿಪಾದಿಸುವಂತಿರುತ್ತಾನೆ.

ಏಳನೆ ಶತಮಾನದಲ್ಲಿದ್ದ ದಂಡಿ ಎಂಬ ಸಂಸ್ಕೃತ ಲಾಕ್ಷಣಿಕನು ಮಹಾಕಾವ್ಯಗಳ ಲಕ್ಷಣಗಳನ್ನು ಹೇಳಿರುವ ಪ್ರಕಾರ ಅವು ಪದ್ಯ., ಗದ್ಯ ಅಥವಾ ಗದ್ಯ-ಪದ್ಯಗಳ ಸಂಮಿಶ್ರ ರೂಪದಲ್ಲಿರುತ್ತವೆ. ಇವುಗಳು ಇತಿಹಾಸವನ್ನು ಆಧರಿಸಿದ್ದು ಅನೇಕ ಉಚಿತ ವಿಭಾಗಗಳನ್ನು ಹೊಂದಿ ಸುದೀರ್ಘವಾಗಿ ನಿರೂಪಿತವಾಗಿರುತ್ತದೆ. ಕಾವ್ಯದ ಪ್ರಾರಂಭದಲ್ಲಿ ಪ್ರಾರ್ಥನೆ, ಕಥಾ ವಸ್ತುವಿನ ನಿರೂಪಣೆ, ಧೀರೋದ್ಧಾತ, ನಾಯಕನ ಚಿತ್ರಣ, ಶೃಂಗಾರಾದಿ ನವರಸಗಳು ಮತ್ತು ಸಮುದ್ರ, ನಗರ ಋತು ಮೊದಲಾದ ಅಷ್ಟಾದಶ ವರ್ಣನೆಗಳು ಪ್ರಮುಖವಾಗಿದ್ದು ಅಂತ್ಯದಲ್ಲಿ ಮಂಗಳವಾಕ್ಯದಿಂದ ಕೂಡಿರುತ್ತದೆ. "ಆದರೆ ಆ ಲಕ್ಷಣಗಳ ಮಾದರಿಯನ್ನು ಇಟ್ಟುಕೊಂಡು ನಾವು ಮಾದೇಶ್ವರನ, ಮಂಟೆಸ್ವಾಮಿಯ, ಮೈಲಾರಲಿಂಗನ ಅಥವಾ ತುಳುವಿನ ಜನಪದ ಮಹಾಕಾವ್ಯಗಳನ್ನು ಅಭ್ಯಾಸ ಮಾಡುವಾಗ ಸಮಸ್ಯೆಗಳು ಎದುರಾಗುತ್ತವೆ".[೨] ಏಕೆಂದರೆ ಶಿಷ್ಟ

---

೧. ಡಾ. ಶಂಕರನಾರಾಯಣ, ತೀ. ನಂ. ಸಂ. ಕರ್ನಾಟಕ ಜನಪದ ಮಹಾಕಾವ್ಯಗಳು, (ಆಶಯ ಭಾಷಣ, ಪ್ರೊ.ಬಿ.ಎ.ವಿವೇಕ ರೈ ೧೯೯೮) ಪುಟ : XII

೧. ಡಾ. ಶಂಕರನಾರಾಯಣ, ತೀ. ನಂ. ಸಂ. ಕರ್ನಾಟಕ ಜನಪದ ಮಹಾಕಾವ್ಯಗಳು, (ಆಶಯ ಭಾಷಣ, ಪ್ರೊ.ಬಿ.ಎ.ವಿವೇಕ ರೈ ೧೯೯೮) ಪುಟ : XIII

ಕಾವ್ಯದಲ್ಲಿ ಕಂಡು ಬರುವ ದೀರ್ಘ ಕಥಾನಕದ ನಡುವಿನ ಉಪಾಖ್ಯಾನ ನಾಯಕ-ಪ್ರತಿನಾಯಕರ ಕಲ್ಪನೆ, ಇರಬೇಕಾದ ಅಷ್ಟಾದಶ ವರ್ಣನೆ ಮತ್ತು ನವರಸಗಳ ಚಿತ್ರಣಗಳು ಹೇಗೆ ಬಂದಿವೆ ಎಂಬ ಹಿನ್ನೆಲೆಯಲ್ಲಿ ಜನಪದ ಮಹಾಕಾವ್ಯಗಳ ಬಗೆಗೆ ಅಧ್ಯಯನ ಮಾಡುವುದು ಸಾಧ್ಯವಾಗುವುದಿಲ್ಲ. ಆದರೂ ದಂಡಿ ಹೇಳುವ ಅಷ್ಟಾದಶ ವರ್ಣನೆಯ ಲಕ್ಷಣ ಹೊರತುಪಡಿಸಿ ಮಿಕ್ಕೆಲ್ಲಾ ಅಂಶಗಳು ಸಾಮಾನ್ಯವಾಗಿ ಜನಪದ ಮಹಾಕಾವ್ಯಗಳಲ್ಲಿ ಕಂಡು ಬರುತ್ತವೆ.

ಜನಪದ ಸಾಹಿತ್ಯದಲ್ಲಿ ಹಾಡು, ಗೀತೆ, ಲಾವಣಿ. ಮಹಾಕಾವ್ಯಗಳು ವಿಶೇಷವೆನಿಸುತ್ತವೆ. ಲಾವಣಿ, ಖಂಡಕಾವ್ಯಗಳ ನಂತರ ವಿಸ್ತೃತವಾದ ರೂಪ ಮಹಾಕಾವ್ಯದ್ದಾಗಿದೆ. ಖಂಡಕಾವ್ಯ ಒಂದು ಸೀಮಿತ ಉದ್ದೇಶವನ್ನು ಒಳಗೊಂಡಿದ್ದರೆ ಮಹಾಕಾವ್ಯವು ತನ್ನದೇ ಆದ ಒಂದು ವ್ಯಾಪಕವಾದ ಉದ್ದೇಶವನ್ನು ಒಳಗೊಂಡಿರುತ್ತದೆ. "ಜನಪದ ಮಹಾಕಾವ್ಯ ಒಬ್ಬ ಸಾಂಸ್ಕೃತಿಕ ವೀರನ ಅಥವಾ ಧಾರ್ಮಿಕ ನಾಯಕನ ಸುತ್ತ ಹೆಣೆದುಕೊಂಡು ತನ್ನ ವಿಸ್ತಾರ ಮತ್ತು ವ್ಯಾಪ್ತಿಗಳಿಂದ ಅನೇಕ ಮಜಲುಗಳಲ್ಲಿ ಸಾಗುವುದನ್ನು ಕಾಣಬಹುದು".[೧]

ಒಂದು ದೇಶದ ಸಾಂಸ್ಕೃತಿಕ ಮತ್ತು ಸಾಮಾಜಿಕ ವರ್ಗದ, ಒಂದು ಜನಾಂಗದ ಪುರಾಣಗಳೆ ಜನಪದ ಮಹಾಕಾವ್ಯಗಳೆನಿಸಿಕೊಳ್ಳುತ್ತವೆ. ಒಂದು ರೀತಿಯಲ್ಲಿ ಜನಪದ ಮಹಾಕಾವ್ಯಗಳು ಆಯಾ ಜನಾಂಗದ ಸಾಂಸ್ಕೃತಿಕ ವಲಯದ ಪುರಾಣವಾಗಿ ತೋರುವುದರಿಂದ ಅವುಗಳನ್ನು ಪುರಾಣಗಳೆಂದೂ ಕರೆಯಲೂಬಹುದು. ಅಷ್ಟರ ಮಟ್ಟಿಗೆ ಅಲ್ಲಿನ ಸಂಗತಿಗಳು ಪುರಾಣಕ್ಕೆ ಹತ್ತಿರವಾಗಿರುತ್ತವೆ. ಆದುದರಿಂದಲೇ ಜನಪದ ಮಹಾಕಾವ್ಯಗಳನ್ನು ಜೀಶಂಪ ಅವರು 'ಅರೆ ಧಾರ್ಮಿಕ ಕಾವ್ಯಗಳು' ಎಂದು ಕರೆದಿದ್ದಾರೆ. ಈ ಮೌಖಿತ ಮಹಾಕಾವ್ಯಗಳು ಆಯಾಯ ಜನಾಂಗಗಳ ಧಾರ್ಮಿಕ ಸಾಂಸ್ಕೃತಿಕ ಚರಿತ್ರೆಯನ್ನು ದಾಖಲಿಸುತ್ತವೆ. ಅಲ್ಲಿ ಬರುವ ಸಾಂಸ್ಕೃತಿಕ ನಾಯಕ ಆ ಜನಾಂಗದ ಮೂಲ ಪುರುಷನಾಗಿದ್ದು ತನ್ನ ಸಮುದಾಯದ ಅಸ್ತಿತ್ವಕ್ಕಾಗಿ ನಡೆಸಿದ ಹೋರಾಟ, ಎದುರಾದ ಸಮಸ್ಯೆಗಳು, ಏಳು-ಬೀಳು ಮೊದಲಾದ ಅಂಶಗಳು ದಾಖಲಾಗಿರುತ್ತವೆ. ಆದುದರಿಂದ ಜನಪದ ಮಹಾಕಾವ್ಯದಲ್ಲಿ ಬರುವ ಸಂಗತಿಗಳಲ್ಲಿ ಚಾರಿತ್ರಿಕವಾದ ಅಂಶಗಳನ್ನು ದಾಖಲಾಗಿರುತ್ತವೆ. ಮೌಖಿಕ ಮಹಾಕಾವ್ಯಗಳಲ್ಲಿ ಬರುವ ಸೃಷ್ಟಿ ಪುರಾಣಗಳು ನಿಜವಾದ ಅರ್ಥದಲ್ಲಿ ಕುಲಪುರಾಣಗಳು, ಅವು ಆಯಾಯ ಜನಾಂಗದ ಮೂಲ ಪುರುಷರನ್ನು ಮತ್ತು

---

೧. ಪ್ರೊ. ಕಾಳೇಗೌಡ ನಾಗವಾರ, ಡಾ. ಅಂಬಳಿಕೆ ಹಿರಿಯಣ್ಣ ಸಂ. ಜೀಶಂಪ ಅವರ ಜಾನಪದ ಬರಹಗಳು, ೨೦೦೦, ಪುಟ - ೧೦೩

ಸಾಂಸ್ಕೃತಿಕ ನಾಯಕರನ್ನೂ ಸ್ಮರಿಸುತ್ತಾ, ಅವರ ಜಾತಿಗೆ ಮತ್ತು ವೃತ್ತಿಗೆ ಒಂದು ಬಗೆಯ ಘನತೆಯನ್ನು ಕಲ್ಪಿಸಿ, ಆ ಮೂಲಕ ಆಯಾಯ ಜನಾಂಗಗಳ ಅಸ್ಮಿತೆಯನ್ನು ಕಟ್ಟಿಕೊಡುತ್ತವೆ.[೧]

ಜನಪದ ಮಹಾಕಾವ್ಯಗಳಲ್ಲಿ ಎರಡು ತೆರನಾದ ವರ್ಗವನ್ನು ಕಾಣಬಹುದು. ಅಖಂಡ ಕಾವ್ಯವನ್ನು ಒಬ್ಬನೇ ಗಾಯಕನು ಸಹ ಗಾಯರೊಡಗೂಡಿ ಹಾಡಿರುವುದು ಒಂದಾದರೆ, ಮತ್ತೊಂದು ಅನೇಕ ಗಾಯಕರು ಹಾಡಿದ ಬಿಡಿ ಬಿಡಿ ಭಾಗಗಳನ್ನು ಒಂದು ಕ್ರಮದಲ್ಲಿ ಜೋಡಿಸಿ ಕೊಂಡಿರುವುದು. ವೃತ್ತಿಗಾಯಕರು ಜನಪದ ಮಹಾಕಾವ್ಯಗಳನ್ನು ಎಂದೂ 'ಮಹಾಕಾವ್ಯ' ಎಂದು ಕರೆದವರಲ್ಲ. ಅವರು ಅವುಗಳನ್ನು ಕಥೆ ಎಂದೇ ಗುರುತಿಸಿದ್ದರು. ಅದಕ್ಕಾಗಿ ಮಲೆ ಮಹದೇಶ್ವರನ ಕಥೆ, ಜುಂಜಪ್ಪನ ಕಥೆ, ಮಂಟೆಸ್ವಾಮಿ ಕಥೆ, ಎಂದೇ ಕರೆಯುತ್ತಿದ್ದರು. Epic ಎಂಬ ಇಂಗ್ಲೀಷ್ ಪದ ಬಳಕೆಯಿಂದಾಗಿ ಮಹಾಕಾವ್ಯ ಎಂಬ ಪದ ಬಳಕೆಗೊಂಡ ಹಿನ್ನೆಲೆಯಲ್ಲಿ ಜನಪದ ಮಹಾಕಾವ್ಯ, ಮೌಖಿಕ ಮಹಾಕಾವ್ಯ ಎಂಬ ಪರಿಕಲ್ಪನೆಯನ್ನು ಇತ್ತೀಚೆಗೆ ಜನಪದ ಸಾಹಿತ್ಯ ಕ್ಷೇತ್ರದಲ್ಲಿಯೂ ಬಳಕೆಗೆ ತರಲಾಗಿದೆ.

ಫಿನಿಷ್ ಭಾಷೆಯ ಮೌಖಿಕ ಮಹಾಕಾವ್ಯವಾದ ಕಲೇವಾಲವನ್ನು ಎಲಿಯಾಸ್ ಲೆನ್ರೊಟ್ ಸಂಪಾದಿಸಿ ೧೮೪೯ರಲ್ಲಿ ಪ್ರಕಟಿಸಿದ್ದು ಜನಪದ ಸಾಹಿತ್ಯ ಕ್ಷೇತ್ರದಲ್ಲಿ ಒಂದು ಮೈಲಿಗಲ್ಲಾಗಿದೆ. 'ಕಲೆವ' ಎಂಬ ಪದದಿಂದ 'ಕಲೆವಾಲ' ಬಂದಿದೆ. ಫಿನ್‌ಲೆಂಡಿನ ರಾಷ್ಟ್ರೀಯ ಮಹಾಕಾವ್ಯವಾಗಿ ಇದು ಬಿಂಬಿಸಲ್ಪಟ್ಟಿದೆ. ಅನೇಕ ಹಾಡುಗಾರರಿಂದ ಸಂಗ್ರಹಿಸಿದ್ದ ಬಿಡಿ ಬಿಡಿ ಕಥೆಗಳನ್ನು ಸಂಪಾದನೆ ಮಾಡಿ ಒಟ್ಟುಗೂಡಿಸಿ 'ಕಲೇವಾಲ' ಜನಪದ ಮಹಾಕಾವ್ಯವನ್ನು ಪ್ರಕಟಿಸಲಾಯಿತು. ವಿದೇಶಗಳ ಇತರ ಜನಪದ ಮಹಾಕಾವ್ಯಗಳಲ್ಲಿ ಟಿಬೆಟ್ಟಿನ 'ಗೆಸರ್ ರಾಜ', ಅರಾಬಿಕ್‌ನ 'ಅಂತರ್' ಕಿರ್ಗಿಜ್‌ನ 'ಮನಸ್', ಉತ್ತರ ಅಮೇರಿಕಾದ 'ಮೊಹಾವೆ ಮಹಾಕಾವ್ಯ' ಜಪಾನಿನ 'ಕೋಟನ್ ಉಟುನ್ನೈ' ಮೊದಲಾದವು ಕಂಡು ಬರುತ್ತವೆ.

ಪಾಶ್ಚಾತ್ಯ ದೇಶಗಳಿಗೆ ಹೋಲಿಸಿ ನೋಡಿದಾಗ ಭಾರತದಲ್ಲಿ ಜನಪದ ಮಹಾಕಾವ್ಯಗಳು ಸಮೃದ್ಧವಾಗಿಯೇ ಕಂಡು ಬರುತ್ತವೆ. ತೆಲುಗಿನಲ್ಲಿ 'ಪಾಲ್ನಾಟಿ ವೀರುಲ ಕಥಾ', ಮರಾಠಿಯಲ್ಲಿ 'ಖಂಡೋಬನ ಕಾವ್ಯ', ರಾಜಸ್ಥಾನಿಯ 'ಪಾಬೂಜಿ', ಅವಧಿಯ 'ಚನೈನಿ', ತುಳುವಿನ 'ಸಿರಿಪಾಡ್ದನ' ಮೊದಲಾದವು ಗಮನ ಸೆಳೆಯುತ್ತವೆ.

---

೧. ಡಾ. ರಾಮಚಂದ್ರನ್ ಸಿ. ಎನ್., ಹೊಸ ಮಡಿಯ ಮೇಲೆ ಚದುರಂಗ, ೨೦೦೭, ಪುಟ-೩೭

ಕನ್ನಡದಲ್ಲಿ ಶ್ರೀಮಂತವಾದ ಜನಪದ ಮಹಾಕಾವ್ಯಗಳು ಬೆಳಕಿಗೆ ಬಂದಿವೆ. ಮಲೆಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಜನಪದ ಹಾಲುಮತ ಮಹಾಕಾವ್ಯ, ಕುಮಾರರಾಮ, ಕೃಷ್ಣಗೊಲ್ಲರ ಕಾವ್ಯ, ಮೈಲಾರ ಲಿಂಗ - ಇವು ಪ್ರಮುಖವಾಗಿವೆ. ಈ ಎಲ್ಲಾ ಮಹಾಕಾವ್ಯಗಳು ಆಯಾಯ ಜನಾಂಗದ ಸಾಂಸ್ಕೃತಿಕ, ಧಾರ್ಮಿಕ ಸಂಗತಿಗಳನ್ನು ಕಟ್ಟಿಕೊಡುತ್ತಾ ಚಾರಿತ್ರಿಕ ದಾಖಲೆಗಳನ್ನು ಸೃಷ್ಟಿಸಿವೆ.

ಡಾ॥ ವೀರಣ್ಣದಂಡೆಯವರು ಉತ್ತರ ಕರ್ನಾಟಕದ ಬೆಳಗಾವಿ, ಬಳ್ಳಾರಿ ಮತ್ತು ಕಲಬುರ್ಗಿ ಜಿಲ್ಲೆಗಳಲ್ಲಿ ಹೆಚ್ಚು ಜನಪ್ರಿಯವಾಗಿರುವ ಕುರುಬ ಜನಾಂಗದ ಧಾರ್ಮಿಕ, ಸಾಂಸ್ಕೃತಿಕ ಸಂಗತಿಗಳನ್ನೊಳಗೊಂಡ ಜನಪದ ಹಾಲುಮತ ಮಹಾಕಾವ್ಯವನ್ನು ಸಂಗ್ರಹಿಸಿ ಸಂಪಾದಿಸಿ ಪ್ರಕಟಿಸಿದ್ದಾರೆ. ಇದು ಹಾಡುಗಾರ ಸೈದಾಪುರದ ಸಿದ್ದಪ್ಪ ಮೇಟಿ ತನ್ನ ಸಂಗಡಿಗರೊಡನೆ ಹಾಡಿದ ಮಹಾಕಾವ್ಯವಾಗಿದೆ. ಏಕವ್ಯಕ್ತಿಯ ಮಹಾಕಾವ್ಯವಾದ್ದರಿಂದ ಇದಕ್ಕೆ ಒಂದು ಮಹತ್ವವೂ ಕೂಡ ಇದೆ. ಈ ಕಾವ್ಯವು ಕುರುಬ ಜನಾಂಗದ ಹುಟ್ಟು, ಅದರ ಮೂಲ ಪುರುಷ ಹಾಗೂ ಆ ಜನಾಂಗದ ಸಾಂಸ್ಕೃತಿಕ, ಧಾರ್ಮಿಕ ನಾಯಕರ ಸಾಧನೆಗಳನ್ನು ತಿಳಿಸುತ್ತದೆ. ಒಟ್ಟಾರೆಯಾಗಿ ಈ ಕಾವ್ಯವು ಕುರುಬ ನೆಲೆಯಲ್ಲಿ ಆ ಜನಾಂಗದ ಬದುಕಿನ ಸಾಂಸ್ಕೃತಿಕ ವಿಕಾಸವನ್ನು ದಾಖಲಿಸುತ್ತದೆ.

## ಅಧ್ಯಾಯ - ೩

## ಜನಪದ ಹಾಲುಮತ ಮಹಾಕಾವ್ಯದ ವಸ್ತು ಮತ್ತು ಸ್ವರೂಪ

### ೧. ಕೈಲಾಸದ ಹಾಡಿಕೆ

ಶಿವನೇ ನಮ್ಮಯಿ ದ್ಯಾವರು ಬಂದಾರ ಬನ್ನೀರೆ

ಸ್ವಾಮಿ ನಮ್ಮಯಿ ದ್ಯಾವರು ಬಂದಾರ ಬನ್ನೀರೆ [೧]

ಎಂದು ಆರಂಭವಾಗುವ ಈ ಜನಪದ ಮಹಾಕಾವ್ಯವು ಹಾಡು ಕಲಿಸಿದ ಗುರು ಸಾಯಿಬಣ್ಣ ಎಂಬುವವರನ್ನು ಸ್ಮರಿಸುತ್ತಾ, ಹಾಡುಗಾರ ಸಿದ್ದಪ್ಪನ ಪರಿಚಯ ನೀಡುತ್ತದೆ. ಮುಂದುವರಿದು ಸೃಷ್ಟಿಯ ಮೊದಲ ಸ್ಥಿತಿ, ದೇವತೆಗಳ ಸೃಷ್ಟಿ, ಭೂಮಿಯ ಸೃಷ್ಟಿ, ಜೀವ ಸೃಷ್ಟಿ ಮೊದಲಾದ ಸಂಗತಿಗಳನ್ನು ವರ್ಣಿಸಿತ್ತಾ ಅನೇಕ ಶೀರ್ಷಿಕೆಗಳಡಿಯಲ್ಲಿ ಬೆಳೆಯುತ್ತಾ ಸಾಗುತ್ತದೆ.

ನೀರೆ ನೀರಂಕಾರದೊಳಗೆ ಭೂಮಿನಾರ ಇಲ್ಲಯ್ಯ

ಆಕಾಶನಿಲ್ಲೇಳಂದಾರ ಭೂಮಿನಿಲ್ಲೇಳಂದಾರ [೨]

ಭೂಮಿ ಆಕಾಶ ಇಲ್ಲದ ಕಾಲದಲ್ಲಿ ಎಲ್ಲೆಡೆ ನೀರು ಮಾತ್ರ ತುಂಬಿತ್ತು. ಗಾಳಿ ಇಲ್ಲದ್ದರಿಂದ ತೆರೆಗಳೂ ಇಲ್ಲ. ಹೀಗಿರುವಾಗ ನೀರಮೇಲೆ ಒಂದು ಗುಳ್ಳೆ ಎದ್ದಿತು. ಇದರಿಂದ ಮೊದಲು ಒಂದು ರುಂಡ ಉತ್ಪತ್ತಿಗೊಂಡು ನಂತರ ಅದಕ್ಕೆ ದೇಹ, ಕೈಕಾಲುಗಳು ಮೂಡಿದವು. ಒಳಗೆ ಮುನ್ನೂರ ಅರವತ್ತು ನರಗಳು ಹುಟ್ಟಿ ಅಖಂಡೇಶ್ವರ ನಿರ್ಮಾಣಗೊಂಡನು. ಈತನ ದೇಹದಲ್ಲಿ ನಾದ ಹುಟ್ಟಿ ಜ್ಯೋತಿರ್ಲಿಂಗ ಸಿದ್ದವಾಯಿತು. ಮಾತು ಮಂತ್ರಗಳು ಹುಟ್ಟಿಕೊಂಡವು. ೫೨ ನಾದದಲ್ಲಿ ೫೨ ಅಕ್ಷರಗಳು ಹುಟ್ಟಿ ಇವುಗಳಿಂದ ವಿದ್ಯಾ ಬುದ್ಧಿಗಳು ಜನಿಸಿದವು. ಹೀಗೆ ಅಖಂಡೇಶ್ವರನ ಪಿಂಡಾಂಡ ನಿರ್ಮಾಣಗೊಂಡು ನೀರೇ ನಿರಂಕಾರದ ನಿರ್ಭಯ ವಸ್ತುವಾಗಿ ಎರಡು ಯುಗ ಕಳೆಯಿತು.

ಎರಡು ಯುಗದ ಕಾಲದಲ್ಲಿ ಏಕವಾಗಿದ್ದ ಅಖಂಡೇಶ್ವರ ತನ್ನ ಎಡಕಿನ ಮಗ್ಗುಲಿನಿಂದ ಮೂರು ಗಣಿಕೆ ಎಲುಬು ತೆಗೆದು ಮಂತ್ರ ಹಾಕಲು ಅದರಿಂದ ಆದಿಶಕ್ತಿ ಪುಟಿದು ನಾರಿಯಾಗಿ ಎಡಕ್ಕೆ ನಿಂತಳು.

ನಾರಿನಾಗಿ ನಿಂತಾಳಪ್ಪಲ್ಲಿ ಖಾನ ಖೂನ ನಡೆದಾವ

---

೧. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೧, ಸಾಲು - ೧ - ೨

೨. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೨, ಸಾಲು - ೧೫ - ೧೬

ಕಾಮ ಕ್ರೋಧ ನಡೆದಾವಪ್ಪಲ್ಲಿ ಮೋಹ ಮಶ್ಚರ ನಡೆದಾವ [೧]

ಹೀಗೆ ಕಾಮ, ಕ್ರೋಧ, ಮೋಹ, ಮತ್ಸರಗಳು ನಡೆದು ಆದಿಶಕ್ತಿ ಒಳಗೆ ಬೀಜದ ಮೇಲೆ ಅಂಕುರ ಫುಟಿದು ಗರ್ಭಿಣಿಯಾಗಿ ರಾಕ್ಷಸರು ಹುಟ್ಟಿದರು. ಈ ವೇಳೆಗೆ ಮೂರು ಯುಗಗಳು ಕಳೆದವು.

ನೀರೇ ನೀರಂಕಾರದಲ್ಲಿ ಭೂಮಿ, ಆಕಾಶ, ಇಲ್ಲದಿರುವಾಗ ಎಲ್ಲೆಲ್ಲೂ ಅಂಧಕಾರವೇ ಇತ್ತು. ಹೀಗಿರುವಾಗ ಗಾಳಿ ಪ್ರಾರಂಭವಾಗಿ ನೀರಿನಲ್ಲಿ ತೆರೆಗಳು ಹುಟ್ಟಿದವು. ಆಗ ಹುಟ್ಟಿಕೊಂಡ ನಿರ್ಮೂಲ ಬೀಜದಿಂದಾಗಿ ಲಕ್ಷಾನುಗಟ್ಟಲೆ ಅಂಡಾಂಡ-ಪಿಂಡಾಂಡಗಳು ಹುಟ್ಟಿಕೊಂಡವು. ಬಸವಣ್ಣ ಹುಟ್ಟಿ ನೀರಿಗೆ ಹೆಪ್ಪುಕೊಟ್ಟು ತಾನು ಶಂಖದೊಳಗೆ ಕುಳಿತನು. ಕೌಡಿಯಲ್ಲಿ ಹುಟ್ಟಿದ ಎಲ್ಲಮ್ಮ ಧುಂದಕಾರದಲ್ಲಿ ಧುನಿಯಾ ಹಿಡಿದಳು.

ನಾಲ್ಕನೆ ಯುಗದಲ್ಲಿ ಸೂರ್ಯ, ಚಂದ್ರರು ಹುಟ್ಟಿದ್ದರಿಂದ ಕತ್ತಲೆ ಹೋಗಿ ಹಗಲು, ರಾತ್ರಿಗಳುಂಟಾದವು. ತಾಸು, ಗಳಿಗೆ, ವಾರ, ತಿಥಿ, ಹುಣ್ಣಿಮೆ, ಅಮಾವಾಸ್ಯೆಗಳು ಐದನೆಯ ಯುಗದಲ್ಲಿ ರೂಪುಗೊಂಡವು. ೨೧ ಲಕ್ಷ ಜಲಚರಗಳು ಜನಿಸಿದವು. ಆರನೆಯುಗ ನಡೆದು ಮುಂದೆ ಬ್ರಹ್ಮ, ವಿಷ್ಣು ರುದ್ರ, ಮಹೇಶ್ವರ, ಮಹದೇವ ಹುಟ್ಟಿ ಬಂದರು. ಇಲ್ಲಿ ಶಾಂತಮುತ್ಯಾ ತಯ್ಯಾರಾಗುತ್ತಾನೆ. ಈತ ರಾಕ್ಷಸರನ್ನು ಮುರಿದು ಕುರಿಗಳನ್ನು ನಿರ್ಮಿಸುತ್ತಾನೆ.

ಐದು ಮಂದಿ ರಕ್ಕಸಗೇರಿಗ ಮುರಿಯಾ ಮಾಡುತಾನೇನ

ಐದು ಕುರಿಗ್ಯೋಳು ಮಾಡ್ಯಾನೆ ಒಬ್ಬ ರಕ್ಕಸರಿಗ ಮುರದಾನ

ಒಬ್ಬ ರಕ್ಕಸ ಮುರದಾನ ಠಗರ ಮಾಡುತಾನೇನ

ಐದು ಕುರಿಯಾ ಒಂದ ಠಗರ ತಯ್ಯಾರ ಮಾಡುತಾನೇನ [೨]

ಹೀಗೆ ನಿರ್ಮಿಸಿದ ಕುರಿಗಳನ್ನು ಶಾಂತಮುತ್ಯಾ ತಾನೇ ಕಾಯುತ್ತಾ, ಉಣ್ಣೆ ತೆಗೆದು ಕಂಬಳಿ ನೆಯ್ಗೆ ಮಾಡುತ್ತಾನೆ. ಡುಳ್ಳಾಸೂರ ದೈತ್ಯನ ಶಿರ ಹೊಡೆದು ಕಂಬಳಿ ನೇಯಲು ಬೇಕಾದ ಸಾಮಾನುಗಳನ್ನು, ಡೊಳ್ಳು, ಶಂಖ, ತಾಳ, ಕತ್ತರಿ ಮೊದಲಾದವುಗಳನ್ನು ಸಿದ್ಧಗೊಳಿಸುತ್ತಾನೆ. ವಡ್ಡಿವಾಲಗ, ಸುಖದ ಕೊಳಲು, ದುಃಖದ ಕೊಳಲುಗಳನ್ನು ನಿರ್ಮಿಸಿಕೊಳ್ಳುತ್ತಾನೆ. ಶಿವ-ಪಾರ್ವತಿಯರ ಲಗ್ನದಲ್ಲಿ ಶಾಂತಮುತ್ಯಾ ವಡ್ಡಿ ವಾಲಗ ಸಮೇತ ಬಂದು ಕಂಬಳಿ ಅಯ್ಯರಿ

---

೧. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೪, ಸಾಲು - ೧೨ - ೧೩

೨. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೭, ಸಾಲು - ೪ - ೮

ಮಾಡುತ್ತಾನೆ. ಕುರಿ ಕಾಯುವುದರಲ್ಲಿ ಬೇಸರಗೊಂಡು ಬ್ರಹ್ಮನಿಗೆ ಕುರಿ ಕಾಯುವುದನ್ನು ವಹಿಸುತ್ತಾನೆ.

ವೈಯ್ಯಾ ನನ್ನ ತಮ್ಮದೇರಾ ನನಗೆ ಬ್ಯಾಸರ ಆದಾವ
ನನಗೆ ಬ್ಯಾಸರಾದಾವೆ ಭಾಗ್ಯ ಕಾಯಲಿ ಬೇಕಯ್ಯ
ಬ್ರಹ್ಮಗ ಹೇಳುತಾನೇನ ಕುರಿಯಾ ಕಾಯುತಾನೇನ
ಬ್ರಹ್ಮ ಬಿಟ್ಟ ಕುರಿಯೇನ ವಿಷ್ಣು ಕಾಯುತಾನೇನ
ವಿಷ್ಣು ಬಿಟ್ಟ ಕುರಿಯೇನ ರುದ್ದರ ಕಾಯುತಾನೇನ
ರುದ್ದರ ಕಾಯ್ದ ಕುರಿಗೋಳು ಮಹೇಶ ಕಾಯುತಾನೇನ
ಮಹೇಶ ಬಿಟ್ಟ ಕುರಿಗೋಳು ಮಹದೇವ ಕಾಯುತಾನೇನ
ಐದು ಮಂದಿನಲ್ಲೇಳ ಬ್ಯಾಸರ ಬಂದು ಕುಂತಾರ [೧]

ಹೀಗೆ ಬ್ರಹ್ಮ ವಿಷ್ಣು ರುದ್ರ, ಮಹೇಶ, ಮಹದೇವ ಒಬ್ಬರ ನಂತರ ಮತ್ತೊಬ್ಬರು ಕುರಿಗಳನ್ನು ಕಾದು ಬೇಸರಗೊಂಡು, ಕೊನೆಗೆ ಮಹಾದೇವ ತನ್ನ ಹೆಂಡತಿಯಾದ ಪಾರ್ವತಿಗೆ ವಹಿಸುತ್ತಾನೆ. ಕಾವ್ಯದಲ್ಲಿ ಆ ಚಿತ್ರ ಹೀಗಿದೆ.

ಭಾಗ್ಯ ಕಾಯಿದೇನಂದಾಳೆ ಬದುಕ ಕಾಯಿದೇನಂದಾಳ
ಮರಿಯಾ ಉಣಸೇನಂದಾಳೆ ಕುರಿಯಾ ನೋಡೆನಂದಾಳ
ಟೊಂಕಿಗ ಸೆರಗ ಸುತ್ತ್ಯಾಳೆ ಏರಿಸಿ ಕಚ್ಚಿ ಹಾಕ್ಯಾಳ [೨]

ಸಿದ್ಧಳಾದ ಪಾರ್ವತಿ ಷಣ್ಮುಖನನ್ನು ಬಗಲಲ್ಲಿ ಎತ್ತಿಕೊಂಡು ಸ್ವರ್ಗದ ಭೂಮಿಯಲ್ಲಿ ಕುರಿ ಕಾಯಲು ತೊಡಗಿದಳು. ಅವಳಿಗೂ ಬೇಸರವಾಗಿ ತನ್ನ ನಂತರ ಕುರಿ ಕಾಯುವವರು ಯಾರೂ ಇಲ್ಲದೆ, ಸ್ವರ್ಗದ ಬಾಗಿಲು ತೆರೆದು ಕುರಿಗಳನ್ನು ಮರ್ತ್ಯಲೋಕಕ್ಕೆ ಹೊಡೆದಳು. ಬಂಕಾಪುರದ ಭೂಮಿಯಲ್ಲಿ ಮೂರು ಕಣ್ಣಿನ ಹುತ್ತ ನೋಡಿ ಅದರೊಳಗೆ ಕುರಿಗಳನ್ನು ಹೊಗಿಸಿ, ಹುತ್ತವನ್ನು ಮುಚ್ಚಿ ಅದರ ಮೇಲೆ ಮುತ್ತಲ ಗಿಡ ನೆಟ್ಟಳು. ನಂತರ ಷಣ್ಮುಖನನ್ನು ಇಳಿಸಿ-

ಕೈಕಾಲ ಮಾರಿ ತೊಳದಾಳೆ ಸೀತಾಳೆ ಶಿವ ಮಜ್ಜಲ
ಸೀತಾಳೆ ಶಿವ ಮಜ್ಜನೆ ನೀರಿಲೆ ಮಕಮಜ್ಜನ

೧. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೧೦, ಸಾಲು - ೧೩ - ೨೦
೨. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೧೦, ಸಾಲು - ೨೩ - ೨೫

ಹಾಕಿದ ಕಚ್ಚಿ ಬಿಚ್ಯಾಳೆ ಟೊಂಕಿನ ಸೆರಗ ಬಿಚ್ಯಾಳೆ

ಮುತ್ತಿನ ಸೆರಗ ಹೊಚ್ಯಾಲೆ ಭೂಮಿಯ ಮ್ಯಾಲೆ ಕುಂತಾಳ

ಎದಿ ಮ್ಯಾಲ ಕೈಯ ವಗದಾಳೆ ಮಲಿಯಾ ತೊಳಿಯುತಾಳೇನ

ಎಡಕಿನ ಮಲಿಯ ಮ್ಯಾಲೆನ ಬಲಗೈ ತಿರುವುತಾಳೇನ

ಎಡಗೈಯಲ್ಲಿನಲ್ಲೇಳ ಮಣ್ಣ ಹಿಡಿಯುತಾಳೇನ

ಬಲಗೈಲಿ ಹಾಲ ಹಿಂಡ್ಯಾಳೆ ಎಡಗೈವಳಗ ಮಣ್ಣೇನ

ಎಡಗೈವಳಗ ಮಣ್ಣೇನ ಮುದ್ದಿಮಾಡುತಾಳೇನ [೧]

ಎಡಗೈಯಲ್ಲಿನ ಮಣ್ಣನ್ನು ಎಡಮೊಲೆಯ ಹಾಲಿನಿಂದ ಮುದ್ದೆ ಮಾಡಿದಂತೆ ಬಲಗೈಲಿ ಮಣ್ಣು ಹಿಡಿದು ಎಡಗೈಯಿಂದ ಬಲ ಮೊಲೆಯ ಹಾಲು ಹಿಂಡಿ ಮುದ್ದೆ ಮಾಡುತ್ತಾಳೆ. ಎಡಗೈಯ ಮಣ್ಣಿನ ಮುದ್ದೆಯಿಂದ ಹೆಣ್ಣು ಗೊಂಬೆಯನ್ನೂ, ಬಲಗೈ ಮಣ್ಣಿನ ಮುದ್ದೆಯಿಂದ ಗಂಡು ಗೊಂಬೆಯನ್ನೂ ಮಾಡುತ್ತಾಳೆ. ಪಾರ್ವತಿಯನ್ನು ಹುಡುಕುತ್ತಾ ಬಂದ ಶಿವನಿಂದ ಎರಡು ಗೊಂಬೆಗಳಿಗೂ ಜೀವ ತುಂಬಿಸುತ್ತಾಳೆ. ಇವುಗಳಿಗೆ 'ಹಾಲುಮತ' ಎಂದು ಕರೆದರು.

ಹಾಲುಮತವನಂತಪ್ಪ ಹೆಸರ ಕರಿಯುತಾರೇನ

ಹಾಲ ತಾಯಿಗಂದಾನೆ ಮತವ ಶಿವರಾಯಿಗಂದಾನ

ಮತವನಂದರ ಮಂತರ ಹಾಲನಂದರ ಮಣ್ಣೇನ [೨]

ಪಾರ್ವತಿ ಸೃಷ್ಟಿ ಮಾಡಿದ ಹೆಣ್ಣು, ಗಂಡುಗಳಿಗೆ ಮುದ್ದವ್ವ-ಮುದಗೊಂಡನೆಂದು ಹೆಸರಿಸಲಾಯಿತು. ಇವರು ದಂಪತಿಗಳಾದರು. ಮರ್ತ್ಯಲೋಕದಲ್ಲಿ ಕೀರ್ತಿ ತರಲೆಂದು ಶಿವ-ಪಾರ್ವತಿಯರು ಹರಸಿದರು. ಮುದ್ದವ್ವ-ಮುದಗೊಂಡರಿಗೆ ಆದಿಗೊಂಡ, ಅನಂತಗೊಂಡ, ಸಿದ್ಧಗೊಂಡ ಮತ್ತು ಪದುಮಗೊಂಡ ಎಂಬ ನಾಲ್ಕು ಗಂಡು ಮಕ್ಕಳು ಹುಟ್ಟಿದರು. ಇವರು ದೊಡ್ಡವರಾಗಿ ಒಕ್ಕಲುತನ ಮಾಡುತ್ತಿದ್ದರು. ನಾಲ್ಕು ಜನ ಮಕ್ಕಳಿಗೂ ಲಗ್ನ ಮಾಡಿದರು. ಆದಿಗೊಂಡನಿಗೆ ಅರವತ್ತು ಮಕ್ಕಳು, ಅನಂತಗೊಂಡನಿಗೆ ಮೂವತ್ತು ಮಕ್ಕಳು, ಸಿದ್ಧಗೊಂಡನಿಗೆ ಇಪ್ಪತ್ತು ಮಕ್ಕಳು ಮತ್ತು ಪದುಮಗೊಂಡನಿಗೆ ನಾಲ್ಕು ಮಂದಿ ಮಕ್ಕಳಾದವು. ಕಿರಿಯನಾದ ಪದುಮಗೊಂಡ ಏನೂ ಕೆಲಸ ಮಾಡದೆ ಕೂತು ಉಣ್ಣುತ್ತಾನೆಂದು ಅಣ್ಣಂದಿರ ಹೆಂಡತಿಯರು -

---

೧. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೧೧, ಸಾಲು - ೨೨ - ೩೦

೨. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೧೩, ಸಾಲು - ೧೦ - ೧೨

ಬೇಡಿದ ಉಣತಾನಲ್ಲಪ್ಪ ತೊಲಿಯಾ ತುಂಡನಾದನ

ತೊಲಿಯಾ ತುಂಡನಿದ್ದಾನೆ ಸುಮ್ಮನೆ ತಿರುಗುತಾನೇನ [೧]

ಎಂದು ಆಪಾದಿಸಿದ್ದರಿಂದ ತಾಯಿಯ ಸಲಹೆಯಂತೆ ಪದುಮಗೊಂಡನು ಮುಂಜಾನೆ ಎದ್ದು ಹೊಲಕ್ಕೆ ಹೋಗಿ ತಾನು ವಶ ಮಾಡಿಕೊಂಡಿದ್ದ ಯಾತಾಳ, ಭೂತಾಳಗಳನ್ನು ಕರೆದು, ಅವುಗಳ ಸಹಾಯದಿಂದ ಮೇವು ಸಂಗ್ರಹಿಸಿ ಮನೆಗೆ ತಂದರೂ, ಅಣ್ಣಂದಿರು ಹೆಂಡತಿಯರ ಮಾತು ಕೇಳಿ ಪದುಮಗೊಂಡನನ್ನು ಬೇರೆ ಹಾಕುತ್ತಾರೆ. ಪದುಮಗೊಂಡನ ಪಾಲಿಗೆ ಬೀಳಿನ ಹೊಲಗಳು, ಹರಕ ಸೋಲ, ಮುರಕ ಜತ್ತಿಗೆ, ಕುಂಟ ಎತ್ತು, ಕುರುಡು ಎತ್ತು ಕೊಡುತ್ತಾರೆ. ಪದುಮಗೊಂಡ ತಾಯಿಯ ಮಾತಿನಂತೆ ಮುಂಜಾನೆದ್ದು ಜಳಕ ಮಾಡಿ ಹೊಲಕ್ಕೆ ಹೋಗಿ ನೇಗಿಲು ಹೂಡುತ್ತಾನೆ. ತಾಯಿ ಹೊತ್ತು ತಂದ ಬುತ್ತಿಯನ್ನು ಅಣ್ಣಂದಿರೊಡನೆ ಕೂತು ಊಟ ಮಾಡಿ ಮತ್ತೆ ನೇಗಿಲು ಹೊಡೆಯಲು ಹೊರಟಾಗ ತಾಯಿ ಪದುಮಗೊಂಡನಿಗೆ ಹೀಗೇ ಹೇಳುತ್ತಾಳೆ.

ಬಾರೋ ಬಾರೋ ಏಯಪ್ಪ ನನ್ನೊಂದು ಮಾತ ಕೇಳಯ್ಯಾ

ಪದುಮಗೊಂಡನಂದಾರೆ ಒಳ್ಳೆದು ಒಳ್ಳೇದಂದಾರ

ಹುತ್ತಿನಗಡ್ಡಿಗಲ್ಲಪ್ಪ ನೇಗಲ ಹಾಕಲಿ ಬ್ಯಾಡಯ್ಯ

ಇದು ವಂದು ಹುತ್ತಿನ ಗಡ್ಡೇನೆ ಹಂಗೆ ಉಳಿಯಲಿ ಅಂದಾಳ [೨]

ಆದರೆ ಪದುಮಗೊಂಡನು ಹುತ್ತದ ಸಮೀಪ ನೇಗಿಲು ಹೊಡೆಯುವಾಗ ಹುತ್ತದ ಮೇಲೆ ನೇಗಿಲು ಹಾಯ್ದು ಹುತ್ತ ಹೋಳಾಗುತ್ತದೆ. ಒಳಗಿಂದ ಅನೇಕ ಕುರಿಗಳು ಹೊರಬರತೊಡಗುತ್ತವೆ. ಅವುಗಳೇನೆಂದು ತಿಳಿಯದ ಪದುಮಗೊಂಡ ಹುತ್ತದ ಬಾಯಿಗೆ ಕಸಕಡ್ಡಿ ಹಾಕಿ ಬೆಂಕಿ ಹಚ್ಚುತ್ತಾನೆ. ಇದರಿಂದಾಗಿ

ಸುಟ್ಟ ಕುರಿಗೋಳು ಅಲ್ಲೇಳ ಕರಿಯನಾಗುತಾವೇನ

ಸುಡಲಾರದ ಕುರಿಗೋಳು ಅಲ್ಲಪ್ಪ ಬಿಳಿಯ ನಾಗುತಾವೇನ

ಹೊಗಿಯ ಹತ್ತುತಾವೇನ ಕಂದನಾಗುತಾವೇನ [೩]

ಅಲ್ಲದೆ ಅರ್ಧ ಮರ್ಧ ಸುಟ್ಟ ಕುರಿಗಳು ಹಂಡ ಬಂಡವಾಗುತ್ತವೆ. ಹೀಗೆ ಬಂದ ಕುರಿಗಳು ಬಂಕಾಪುರದ ಭೂಮಿಯ ಹನ್ನೆರಡು ಕೂರಗೆ ಹೊಲದಲ್ಲಿ ತುಂಬಿ ನಿಂತವು. ಬಂಗಾರದ

---

೧. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೧೫, ಸಾಲು - ೧೧ - ೧೨

೨. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೨೧, ಸಾಲು - ೧೨ - ೧೫

೩. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೨೧, ಸಾಲು - ೨೯ - ೩೧

ಕೋಡಿನ ಟಗರು ಹುತ್ತವನ್ನು ತಿರುವಿ ಒಗದು ಮೇಲೆ ಬಂದವು. ತಳದಲ್ಲೇ ಉಳಿದ ಕುರಿಗಳು ಹಾಲಮ್ಮಿಯಾಗಿ ಹುಟ್ಟಿದವು. ಪದುಮಗೊಂಡ ಕುರಿಗಳ ಹಿಂದೆ ಸತತವಾಗಿ ಮೂರುದಿನ ಅನ್ನ, ನೀರುಗಳಿಲ್ಲದೆ ನಡೆದನು. ಶಿವನು ಅವನಿಗೆ ಎದುರಾಗಿ ಕ್ಷೇಮ ವಿಚಾರಿಸಿ, ಯಾವ ದಿಕ್ಕಿಗೆ , ಯಾವ ಊರಿಗೆ ಹೋಗುವುದೆಂದು ಕೇಳಿದ. ತನಗೆ ತುಂಬಾ ಹಸಿವಾಗಿದೆಯೆಂದು ಪದುಮಗೊಂಡ ಹೇಳಿದಾಗ ಶಿವ ಗಿಣ್ಣು ಮಾಡೋಣವೆಂದ.

ಹಸಿಯ ಹಾಲನಿದ್ದಾವೆ ಬಿಸಿಯಾ ಗಿಣ್ಣ ಮಾಡಾರೆ
ಬೆಂಕಿ ಬೇಕೇಳಂದಾನ ಖೊಬ್ಬರಿ ಬೇಕೇಳಂದಾನ [೧]

ಶಿವನು ಹೇಳಿದಂತೆ ಬೆಂಕಿ ಮತ್ತು ಕೊಬ್ಬರಿ ತರಲು ಗುಡ್ಡಕ್ಕೆ ಹೋದ ಪದುಮಗೊಂಡ ಬಂಡೆಯ ಬಿರುಕಿನಲ್ಲಿ ಹೊಗೆ ಬರುವುದನ್ನು ಕಂಡನು. ಬಂಡೆಯ ಬಾಗಿಲನ್ನು ಮುಚ್ಚಿದ್ದ ಏಳು ಗಜದ ಕಲ್ಲನ್ನು ಸರಿಸಿದಾಗ, ರಾಕ್ಷಸಿ ಅಪಹರಿಸಿ ತಂದಿರಿಸಿಕೊಂಡಿದ್ದ ಜಕ್ಕಪುರದ ಅರಸನ ಮಗಳಾದ ಶಿವಲಿಂಗಮ್ಮಳನ್ನು ಕಂಡು, ಆಕೆಯಿಂದ ಕೊಬ್ಬರಿ ಗುಂಡು, ಬೆಂಕಿಯನ್ನು ಬೇಡಿ ಪಡೆದುಕೊಂಡನು. ಶಿವನು ಮಂಡಿಯೂರಿ ಕುಳಿತು ಮೊಣಕಾಲುಗಳಲ್ಲಿ ಕೊಬ್ಬರಿ ಬಟ್ಟಲನ್ನು ಹಿಡಿದು, ಎರಡೂ ಕೈ ಬೆರಳಿನಿಂದ ಕುರಿಯ ಮೊಲೆಗಳನ್ನು ಹಿಂಡಿ ಹಾಲು ಕರೆದು, ಪದುಮಗೊಂಡನಿಗೂ ಕಲಿಸಿಕೊಡುತ್ತಾನೆ. ನಂತರ ಬೆಂಕಿಯ ಮೇಲಿಟ್ಟು ಗಿಣ್ಣ ಮಾಡುವುದನ್ನು ಕಲಿಸಿಕೊಡುತ್ತಾನೆ. ಅವರಿಬ್ಬರು ಉಂಡ ಬಳಿಕ ಉಳಿದಿದ್ದ ಒಂದು ತುತ್ತು ಗಿಣ್ಣಿನ ಸಹಿತ ಕೊಬ್ಬರಿ ಗುಂಡನ್ನು ಶಿವಲಿಂಗಮ್ಮಳಿಗೆ ಕೊಟ್ಟು ಬರಲು ಪದುಮಗೊಂಡ ಗುಡ್ಡಕ್ಕೆ ಬರುತ್ತಾನೆ. ಓಡಿ ಬಂದ ಅವಳು ಕೊಬ್ಬರಿಗುಂಡ ಪಡೆದು ಉಳಿದಿದ್ದ ತುತ್ತನ್ನು ಬಾಯಿಗಿಟ್ಟು, ಇಂತಹ ಪಂಚಾಮೃತ ಎಲ್ಲಿ ದೊರೆಯುತ್ತದೆಂದು ಭಾವಿಸಿ, ಇವನನ್ನು ಬಿಡಬಾರದೆಂದು ಬೆನ್ನು ಹತ್ತುತ್ತಾಳೆ. ಇಬ್ಬರೂ ಗುಡ್ಡ ಇಳಿದು ಬರುವಾಗ ರಾಕ್ಷಸಿ ನೋಡಿ ಬಾಯಿ ತೆರೆದುಕೊಂಡು ಬರುವಾಗ ಪದುಮಗೊಂಡ ಕುರಿಮರಿಯೊಂದರ ಕಾಲು ಹಿಡಿದು ಬೀಸಿ ಎಸೆದನು. ಅದು ರಕ್ಕಸಿಯ ಬಾಯಲ್ಲಿ ಬೀಳುತ್ತದೆ. "ನನಗೆ ಹೆಣ್ಣು ಕೊಟ್ಟೇನ ನಿನಗೆ ಮರಿಯ ಬಿಟ್ಟೇನ" ಎಂದು ಹೇಳಿ, ತೋಳನಾಗಿ ಹುಟ್ಟು ಎಂದು ರಕ್ಕಸಿಗೆ ಹೇಳಿದನು.

ಪದುಮಗೊಂಡ ಮತ್ತು ಶಿವಲಿಂಗಮ್ಮರಿಗೆ ಮದುವೆ ಮಾಡಲು ಆಲೋಚಿಸಿದ ಶಿವನು,

---

೧. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೨೪, ಸಾಲು - ೧೬ - ೧೭

ಬ್ರಹ್ಮ ವಿಷ್ಣು ಮಹೇಶ್ವರ ಹಾಗೂ ಪಾರ್ವತಿಯರನ್ನು ಕರೆಸಿದನು. ಮದುವೆಗೆ ಸಿದ್ಧತೆ ನಡೆಯಿತು. ಸುರಗಿ ನೂಲು ಸಿಗದಿದ್ದಾಗ ಕುರಿಯ ಉಣ್ಣೆಯ ಕಂಕಣವನ್ನೇ ಬಳಸಿದರು. ಇವರ ವಂಶಜರೇ ಉಣ್ಣೆ ಕಂಕಣದವರು. ಮದುವೆಯಾದ ನಂತರ ಗಂಡ-ಹೆಂಡತಿಯರಿಬ್ಬರೂ ಕುರಿ ಕಾಯುತ್ತಾ, ಕತ್ತಲಾದಲ್ಲಿ ತಂಗುತ್ತಾ ಹೊರಟರು. ಶಿವಲಿಂಗಮ್ಮ ಗರ್ಭಿಣಿಯಾಗಿ, ಗಂಡು ಮಗುವಿಗೆ ಜನ್ಮವಿತ್ತಳು. ಅಡವಿಯಲ್ಲಿ ಹುಟ್ಟಿದ್ದರಿಂದ ಮಡ್ಡಪ್ಪನೆಂದು ಹೆಸರಿಟ್ಟರು. ಮಗುವಿಗಾಗಿ ಮೂರು ಮೊಳದ ಹುಟ್ಟು ಗಂಬಳಿಯನ್ನು ತಯಾರಿಸಿದರು. ಮಡ್ಡಪ್ಪ ನಾಲ್ಕೈದು ವರ್ಷದವನಾದಾಗ ಒಂದು ರಾತ್ರಿ ಮಗುವನ್ನು ಮಲಗಿಸಿ, ಕುರಿಯ ಹಿಂಡಿನ ಒಂದು ಕಡೆ ಗಂಡ, ಮತ್ತೊಂದು ಕಡೆ ಹೆಂಡತಿ ಮಲಗಿದ್ದು, ಮುಂಜಾನೆ ಎದ್ದು ಕೂಸನ್ನು ಮರೆತು ಕುರಿಗಳನ್ನು ಹೊಡೆದುಕೊಂಡು ಹೊರಟರು. ಕೂಸು ಗಂಡನ ಹತ್ತಿರವಿದೆಯೆಂದು ಹೆಂಡತಿಯೂ, ಹೊಂಡತಿಯ ಹತ್ತಿರವಿದೆಯೆಂದು ಗಂಡನೂ ಭಾವಿಸಿ, ದಿನವಿಡೀ ನಡೆದು ಸಂಜೆ ಇಬ್ಬರೂ ಕೂಡಿದಾಗ ಕೂಸು ತಪ್ಪಿಸಿಕೊಂಡಿರುವುದು ಅರಿವಿಗೆ ಬಂತು. ಆದರೆ ಹುಡುಕುವುದು ಪ್ರಯೋಜನವಿಲ್ಲವೆಂದು ಭಾವಿಸಿ ಮಾರನೆ ಮುಂಜಾನೆ ಕುರಿಗಳನ್ನು ಹೊಡೆದುಕೊಂಡು ಹೊರಟರು.

ಬೆಳಿಗ್ಗೆ ಎದ್ದು ಮಡ್ಡಪ್ಪ ನೋಡುವಾಗ ಅಲ್ಲಿ ಯಾರೂ ಇರಲಿಲ್ಲ. ಅಲ್ಲಿಂದ ಒಂದು ಹರಿದಾರಿ ನಡೆದು ಗೌರಿ ಆಕಳ ಜಾಗಕ್ಕೆ ಬರುತ್ತಾನೆ.

ಕಾಡಾಕಳ ಜಾಗಕ ಮಡ್ಡಪ್ಪ ಹೋಗುತಾನೇನ
ಕೈಯಾಗ ಕಂಬಳಿ ಹಿಡಿದಿದ್ದ ಹೆಗಲಿಗೆ ಹಾಕುತಾನೇನ
ಐದು ಆರು ವರ್ಷಿನವ ಗಿಡದಾಗ ಏರುತಾನೇನ
ಗಿಡದಾಗ ಏರುತಾನೇನ ಮ್ಯಾಲೆ ಕುಂದ್ರುತಾನೇನ [೧]

ಆ ಗಿಡದ ಕೆಳಗೆ ಕಾಡಾಕಳು ವಾಸವಾಗಿದ್ದವು. ಅಲ್ಲಿದ್ದ ಕಲ್ಲಿನ ದೋಣಿಯಲ್ಲಿ ಹಾಲು ಸುರಿಸುತ್ತಿದ್ದವು. ಮಡ್ಡಪ್ಪ ಆಕಳು ಇಲ್ಲದಾಗ ಕೆಳಗಿಳಿದು ಬಂದು ಹಾಲು ಕುಡಿದು ಮತ್ತೆ ಗಿಡವೇರಿ ಕೂರುತ್ತಿದ್ದ. ಆಕಳುಗಳಿಗೆ ಮನುಷ್ಯನ ವಾಸನೆ ಬಡಿದು ಮೇಲೆ ನೋಡಿ ಮಡ್ಡಪ್ಪನನ್ನು ಕಂಡವು. ತನಗೆ ತಾಯಿ, ತಂದೆ ಯಾರೂ ಇಲ್ಲವೆಂದು ಹೇಳಿದ್ದರಿಂದ ಕನಿಕರಿಸಿ ತಮ್ಮೊಡನೆ ಇರಿಸಿಕೊಂಡವು. ಹತ್ತಾರು ವರ್ಷ ಹೀಗೆ ಗಿಡದ ಮೇಲೆ ವಾಸವಾಗಿದ್ದ ಮಡ್ಡಪ್ಪ ಜೀವಾಳ

---

೧. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೩೪, ಸಾಲು - ೧೦ - ೧೩

ಕಡ್ಡಿಯಿಂದ ಸುಖದ ಕೊಳಲು ಮತ್ತು ದುಃಖದ ಕೊಳಲು ಮಾಡಿಕೊಂಡನು. ಸುಖದ ಕೊಳಲು ಊದಿದಾಗ ಆಕಳುಗಳು ಸಂತೋಷವಾಗಿರುತ್ತಿದ್ದವು. ದುಃಖದ ಕೊಳಲು ಊದಿದಾಗ ರಕ್ಷಣೆಗೆ ಓಡಿ ಬರುತ್ತಿದ್ದವು. ಮತ್ತೆ ಹತ್ತಾರು ವರ್ಷ ಕಳೆದು ಮಡ್ಡಪ್ಪ ಸುಮಾರು ಇಪ್ಪತ್ತೈದು ವರ್ಷದವನಾದನು.

ಮಡ್ಡಪ್ಪ ವಾಸವಾಗಿದ್ದ ಅಡವಿಗೆ ಸಮೀಪವಿದ್ದ ಹಳ್ಳಿಯಲ್ಲಿ ವಾಸವಾಗಿದ್ದ ಗಾಣಿಗರ ಮಲ್ಲಪ್ಪ ತುಂಬಾ ಬಡವನಾಗಿದ್ದನು. ಒಂದು ದಿನ ಈತನನ್ನು ಯಾರೂ ಕೂಲಿಗೆ ಕರೆಯದಿದ್ದುದರಿಂದ ಗುದ್ದಲಿ ಹೆಗಲಿಗೆ ಹಾಕಿಕೊಂಡು ಅಡವಿಗೆ ಹೋದನು. ಮಡ್ಡಪ್ಪನಿದ್ದ ಗಿಡದ ಹತ್ತಿರ ಬಂದಾಗ, ಅವನಿಗೆ ಮಲ್ಲಪ್ಪ ನಮಸ್ಕರಿಸಿದನು. ಮಡ್ಡಪ್ಪ ಹಾಲಿನ ಡೋಣಿ ತೋರಿಸಿದಾಗ ಮಲ್ಲಪ್ಪ ಅದನ್ನು ಕುಡಿದು ರುಚಿಗೆ ಮಾರು ಹೋದನು. ಹಾಲನ್ನು ತೆಗೆದುಕೊಂಡು ಹೋಗಿ ಉಪವಾಸವಿದ್ದ ಹೆಂಡತಿ, ಮಕ್ಕಳಿಗೂ ಕೊಟ್ಟನು. ಹೆಂಡತಿಯ ಸಲಹೆಯಂತೆ ಕೊಡದಲ್ಲಿ ಹಾಲು ತುಂಬಿ ತಂದನು. ಮಡ್ಡಪ್ಪನು ಅನುಮತಿ ನೀಡಿದಂತೆ ಹಾಲು ತರುತ್ತಾ ಗಾಣಿಗನು ಹಾಲಿನ ವ್ಯಾಪಾರವನ್ನು ಆರಂಭಿಸಿ ಹಣಗಳಿಸುತ್ತಾ ಶ್ರೀಮಂತನಾದನು. ತನಗೆ ಉಪಕಾರ ಮಾಡಿದ ಮಡ್ಡಪ್ಪನಿಗೆ ತನ್ನ ಮಗಳನ್ನೇ ಕರೆತಂದು ಗಿಡದ ಬುಡದಲ್ಲಿ ಮದುವೆ ಮಾಡಿಕೊಟ್ಟನು. ಮಡ್ಡಪ್ಪ ತನ್ನ ಮೂರು ಮೊಳದ ಕಂಬಳಿಯನ್ನು ಗಾಣಿಗನಿಗೆ ಕೊಟ್ಟು, ಗೌಳಿಗನಾಗಿ ಎಮ್ಮೆ ಸಾಕಲು ತಿಳಿಸಿದನು. ಹತ್ತು ಎಮ್ಮೆ ಕಟ್ಟಿದರೆ ಒಂದು ಹಸು ಇರಲಿ ಎಂದು ಸಲಹೆ ನೀಡಿ ಪಶುಪಾಲನೆಗೆ ಮಲ್ಲಪ್ಪನನ್ನು ಒಪ್ಪಿಸಿದನು. ಮಡ್ಡಪ್ಪ-ಗಂಗಮ್ಮನಿಗೆ ಅಡವೆಪ್ಪನೆಂಬ ಮಗ ಹುಟ್ಟಿದನು.

ಮಲ್ಲಪ್ಪನು ಗೌಳಿಗನಾಗಿ ಮಡ್ಡಪ್ಪನಿಂದ ಆಕಳುಗಳನ್ನು ಪಡೆದು ಹೆಗಲ ಮೇಲೆ ಕಂಬಳಿ ಹಾಕಿಕೊಂಡು, ಕೈಯಲ್ಲಿ ಕೋಲು ಹಿಡಿದು ಕಾಡಿನಲ್ಲಿ ಆಕಳು ಮೇಯಿಸುತ್ತಿರುತ್ತಾನೆ. ಅಲ್ಲಿಗೆ ಮುದ್ದವ್ವ-ಮುದಗೊಂಡರು ಬಂದು ಮಡ್ಡಪ್ಪನ ಕಂಬಳಿಯ ಗುರುತು ಹಿಡಿದು, ಇದು ಯಾರ ಕಂಬಳಿ, ನಿನಗ್ಹೇಗೆ ದೊರಕಿತು? ಎಂದು ಕೇಳಿದಾಗ ಗಾಣಿಗನು ಎಲ್ಲಾ ಕತೆಯನ್ನು ಹೇಳಿದನು. ತಾಯಿ-ತಂದೆಯರು ಮಡ್ಡಪ್ಪನನ್ನು ಸೇರಿದರು. ಅವರು ಕಾಡಿನಲ್ಲಿ ಇರುವುದರಿಂದ ಕಾಡು ಕುರುಬರೆಂದೂ, ಪದುಮಗೊಂಡನ ಮಕ್ಕಳೇ ಗೊಂಡಕುರುಬರೆಂದು ಪ್ರಸಿದ್ಧಿ ಪಡೆದರು.

---

## ೨. ಬೀರಪ್ಪನ ಪೂರ್ವಜರ ವೃತ್ತಾಂತ :

ತಿಪರಂಗಿ ನಾಡಿನ ಅರಸನಾದ ತಿಪರೇಸೂರನಿಗೆ ತಿಪ್ಪಾದೇವಿ ಎಂಬ ಹೆಂಡತಿ ಇದ್ದಳು. ಇವರಿಗೆ ಏಳು ಮಂದಿ ಹೆಣ್ಣುಮಕ್ಕಳಿದ್ದರು. ವಯಸ್ಸಿಗೆ ಬಂದ ಇವರನ್ನು ಏಳು ಜನ ಅಣ್ಣ ತಮ್ಮಂದಿರನ್ನು ಹುಡುಕಿ ಮದುವೆ ಮಾಡಲು ಯೋಚಿಸಿದನು. ಊರಿನ ತಮ್ಮ ವಾರಿಗೆಯ ಹೆಣ್ಣುಮಕ್ಕಳು ಮದುವೆಯಾಗಿ, ಮಕ್ಕಳನ್ನು ಎತ್ತಿಕೊಂಡು ಬರುವುದನ್ನು ಕಂಡ ಸೋದರಿಯರು ತಮ್ಮ ತಂದೆ ತಮ್ಮನ್ನು ಗೊಡ್ಡುಕೆಡವಿದನೆಂದು ನೊಂದು ಆಡಿಕೊಂಡರು. ಸೇವಕಿಯರಿಂದ ಈ ಮಾತುಗಳು ತಿಪರೇಸೂರನ ಕಿವಿಗೆ ಬಿದ್ದು, ವರಗಳನ್ನು ಹುಡುಕಿ ಬರುವೆನೆಂದು ಕುದುರೆಯೇರಿ ಹೊರಟನು. ಒಂದು ಹೊಳೆಯ ದಂಡೆಯ ಮೇಲೆ ಕುಳಿತು, ಊಟ ಮಾಡಿ ಅಂದೇ ಸಂಕ್ರಾಂತಿ ಆಚರಣೆಯಾಗಿ ಅಲ್ಲಿಯೇ ಹೊತ್ತುಗಳೆದು ಹಿಂತಿರುಗಿದನು.

ತಾನು ಸಂಬಂಧ ನೋಡಿ ಬಂದಿರುವುದಾಗಿ ಸುಳ್ಳು ಹೇಳಿ, ಆ ಏಳು ಮಂದಿ ಸಹೋದರರು ನೋಡಲು ನಿಮ್ಮನ್ನು ಕರೆತರಲು ಹೇಳಿದ್ದಾರೆಂದು ನಂಬಿಸಿ ಅವರೊಡನೆ ಹೊಳೆದಂಡೆಗೆ ಬಂದನು. ಸ್ನಾನ ಮಾಡಲು ಅವರನ್ನು ಹೊಳೆಗೆ ಇಳಿಸಿ, ಮುಖಕ್ಕೆ ನೀರು ಚಿಮ್ಮುತ್ತಾ ಮುಂದೆ ಸಾಗುವಂತೆ ಮಾಡಿ ಅವರು ಸುಳಿಗೆ ಸಿಲುಕುವಂತೆ ಮಾಡಿದನು. ಸುಳಿಯಲ್ಲಿ ಸಿಕ್ಕು ಆರು ಜನ ಹೆಣ್ಣು ಮಕ್ಕಳು ನೀರು ಪಾಲಾದರು. ಕಡೆಯವಳಾದ ಕಮಳಾದೇವಿ ಬೆನ್ನಲಿ ಈಸಿ ಪಾರಾಗಿ ಬಂದಳು. ಮನೆಗೆ ಕೆಟ್ಟ ಹೆಸರು ತರದ ಹಾಗೆ ತಾನು ಇರುತ್ತೇನೆಂದು, "ಜೀವ ಹೋಗದು ಪಾಡಪ್ಪ ಮರ್ಯಾದಿ ಹೋಗದು ಬ್ಯಾಡಪ್ಪ" ಎಂದು ತಂದೆಗೆ ವಿನಂತಿ ಮಾಡಿಕೊಂಡಳು.

ತಂದೆಯು ಆಕೆಯೊಡನೆ ಮನೆಗೆ ಬಂದ ಮೇಲೆ ಅವಳನ್ನು ಹೂವಿನ ತೂಕ ಮಾಡಿ, ಏಳಂತಸ್ತಿನ ಮಹಡಿಯಲ್ಲಿ ಕೂಡಿಟ್ಟು, ಬೀಗ ಹಾಕಿ ಕಾವಲಿರಿಸಿದನು. ಇಪ್ಪತ್ನಾಲ್ಕು ವರ್ಷಗಳ ನಂತರ ತನ್ನ ಮುಂದಲೆಗೆ ನೆರೆಕಂಡು ಮೂರು ಲೋಕದಲ್ಲಿ ನನ್ನಂತಹ ಪತಿವ್ರತೆ ಯಾರೂ ಇಲ್ಲವೆಂಬ ಭಾವನೆ ಕಮಳಾದೇವಿಯಲ್ಲಿ ಮೂಡಿತು. ಇದಕ್ಕಾಗಿ ಏರ್ಪಟ್ಟ ಮೆರವಣಿಗೆಯಲ್ಲಿ ಹೊರಟ ಕಮಳಾದೇವಿ ಸಕ್ಕರೆ ಬೀರುತ್ತಾ ಊರಲ್ಲಿ ಬರುವಾಗ ನಾರದನು ಕಂಡು ಏನಿದೆಂದು ವಿಚಾರಿಸಿದನು. ತನ್ನಂತಹ ಪತಿವ್ರತೆ ಮೂರುಲೋಕದಲ್ಲಿಯೂ ಇಲ್ಲವೆಂದು ಆಕೆ ಹೇಳಿದ ಮಾತನ್ನು ನಾರದನು ಕೇಳಿ, ಪಾರ್ವತಿ, ಲಕ್ಷ್ಮಿ, ಸರಸ್ವತಿಯರಿಗೆ ಚಾಡಿ ಹೇಳಿ ಕೋಪ ಬರಿಸಿದನು.

ಈ ಮೂವರೂ ಒಟ್ಟಾಗಿ, ಕಮಳಾದೇವಿಯ ಪಾತಿವ್ರತ್ಯ ಹಾಳು ಮಾಡಿಬರಲು ಶಿವನನ್ನು ಒತ್ತಾಯ ಮಾಡಿ ಒಪ್ಪಿಸಿದರು. ತಿಪರಂಗಿ ನಾಡಿಗೆ ಬಂದ ಶಿವನನ್ನು ತಿಪರೇಸೂರನು ಗೌರವದಿಂದ ಮನೆಗೆ ಕರೆದೊಯ್ದು ಸತ್ಕರಿಸುತ್ತಾನೆ. ಶಿವನು ಕಮಳಾದೇವಿಯನ್ನು ತನಗಾಗಿ ಕೋರಿದಾಗ, ನಿನ್ನಂಥ ಸನ್ಯಾಸಿಗೆ ಯಾರು ಹೆಣ್ಣು ಕೊಡುತ್ತಾರೆಂದು ಅರಸನು ಜರಿಯುತ್ತಾನೆ. ಶಿವನು ಅಲ್ಲಿಂದ ಹೊರಟು ಕಮಳಾದೇವಿಗೆ ಸೂಜಿ, ಡಬ್ಬಣದಿಂದ ಚುಚ್ಚುವಂತಹ ಬೇನೆ ಉಂಟು ಮಾಡಿದನು.

ಶಿವನು ಬುಡುಬುಡುಕ್ಯಾನ ವೇಷ ಧರಿಸಿ, ಎಲ್ಲಾ ತರದ ಬೇನೆ ಗುಣಪಡಿಸುತ್ತೇನೆಂದು ಸಾರುತ್ತಾ ಊರಲ್ಲಿ ಸಾಗಿದನು. ಕಮಳಾದೇವಿಯ ಬೇನೆ ಗುಣಪಡಿಸಲು ಇವನನ್ನು ಕರೆದೊಯ್ದರು. ಕಮಳಾದೇವಿಯನ್ನು ಕಂಡ ಈತ ಮದುವೆಯಾದವರಿಗೆ ಮಾತ್ರ ತಾನು ಔಷಧ ಕೊಡುವುದಾಗಿ ಹೇಳುತ್ತಾನೆ. ನೆಟ್ಟ ಕೂಡಲೆ ಗಿಡವಾಗಿ ಬೆಳಎಯುವ ಸಸ್ಯದ ಬೀಜವನ್ನು ಕೊಟ್ಟು ಊರಲು ಹೇಳುತ್ತಾನೆ. ಆ ಗಿಡದೊಂದಿಗೆ ಕಮಳಾದೇವಿಯ ಮದುವೆ ಮಾಡಬೇಕೆಂದು ತಿಳಿಸಿ, ಬೀಜ ಕೊಟ್ಟು ಅಲ್ಲಿಂದ ಮರೆಯಾಗುತ್ತಾನೆ. ಅನಂತರ ಅವಳ ಬೇನೆ ಕಡಿಮೆಯಾಗುತ್ತಾ ಹೋಗುತ್ತದೆ. ಊರಿದ ಬೀಜ ಸಸ್ಯವಾಗಿ, ಸೂರ್ಯ ಮೇಲೇರಿದಂತೆ ಅದು ಬೆಳೆಯುತ್ತಾ ಕೆಲವೇ ವೇಳೆಯಲ್ಲಿ ಗಿಡವಾಗುತ್ತದೆ. ಇದರ ಜೊತೆ ಕಮಳಾದೇವಿಯ ಮದುವೆ ನಡೆದಾಗ ಕೋಲ್ಮಿಂಚು ಹೊಡೆದು, ಆಕೆಯ ಗರ್ಭ ಬೆಳೆಯಲು ಪ್ರಾರಂಭವಾಗುತ್ತದೆ. ಕಮಳಾದೇವಿಯ ಹೊಟ್ಟೆ ಬೆಳೆಯುವುದನ್ನು ಕಂಡ ಸೇವಕಿಯರು ಗಾಬರಿಯಾಗಿ, ಇದು ಅರಸನಿಗೆ ತಿಳಿದರೆ ತಮಗೆ ಉಂಟಾಗುವ ವಿಪ್ಪತ್ತನ್ನು ಲೆಕ್ಕಹಾಕಿ, ಅದರಿಂದ ಪಾರಾಗಲು ಯೋಚಿಸುತ್ತಾರೆ.

ಕಮಳಾದೇವಿಗೆ ಹೆರಿಗೆ ಸಮಯ ಸಮೀಪಿಸಿದುದನ್ನು ಲೆಕ್ಕಾಚಾರದಿಂದ ತಿಳಿದ ಪಾರ್ವತಿ, ಶಿವನು ಕದ್ದು ಮಾಡಿದ ಹಾದರವನ್ನು ಗೆದ್ದು ತರುವೆನೆಂದು ಕೊರವಂಜಿ ವೇಷ ಧರಿಸಿ ಬರುತ್ತಾಳೆ. ಸೇವಕಿಯರು ಹುಟ್ಟಿದ ಮಗುವನ್ನು ಹೊರಗೆ ಎಸೆಯಲು ಬಂದಾಗ, ಮನೆಯ ಮುಂದೆ ಭಿಕ್ಷೆಗೆ ನಿಂತ ಕೊರವಂಜಿ ಬುಟ್ಟಿಗೆ ಹಾಕುತ್ತಾರೆ. ಕೊರವಂಜಿ ವೇಷದ ಪಾರ್ವತಿ ಬುಟ್ಟಿಯನ್ನು ಹೊತ್ತು ಕೈಲಾಸಕ್ಕೆ ಹೊರಟಾಗ, ಶಿವನು ಪಾರ್ವತಿಗೆ ಗೊತ್ತಾಗದಂತೆ ಬುಟ್ಟಿಯಲ್ಲಿನ ಕೂಸನ್ನು ಹದ್ದಿನ ರೂಪದಲ್ಲಿ ಬಂದು ಹೊಯ್ದು ಜಂಬೂದ್ವೀಪದ ಗಡ್ಡಿಯ ಕೊಳದ ಕಮಳದ ಹೂವಿನಲ್ಲಿರಿಸುತ್ತಾನೆ. ಶಿವನು ಹಾದರ ಮಾಡಿರುವುದನ್ನು ವಿಷ್ಣು, ಬ್ರಹ್ಮರಿಗೆ ತೋರಿಸುತ್ತೇನೆಂದು ಅವರೆದುರು ಬುಟ್ಟಿ

ಇಳುಹಿ ನೋಡಿದಾಗ ಮಗು ಅಲ್ಲಿರಲಿಲ್ಲ. ಗಾಬರಿಗೊಂಡ ಪಾರ್ವತಿ ಬೆವರಿದಳು. ಬೆವರಿಂದ ಒದ್ದೆಯಾದ ಮೈಯ ಮಣ್ಣು ತೆಗೆದು ಗೊಂಬೆ ಮಾಡಿದ ಪಾರ್ವತಿ ಅದಕ್ಕೆ ಶಿವನಿಂದ ಜೀವ ತುಂಬಿಸಿದಳು. ಆ ಮಗುವಿಗೆ ಅಮೋಗಿಸಿದ್ಧ ಎಂದು ಹೆಸರಿಟ್ಟರು.

ಶಿವಭಕ್ತನಾದ ಕಾಳಿನಾರಾಯಣ ದೇವರು ದಿನ ನಿತ್ಯ ಖಾಸ ಬಾಗದ ಹೂ ಮತ್ತು ನಾಗರಬಾವಿ ನೀರಿನಿಂದ ಶಿವಪೂಜೆ ಮಾಡುತ್ತಿದ್ದನು. ಆದರೆ ಶಿವನು ತನ್ನ ಪೂಜೆಗೆ ಜಂಬೂದ್ವೀಪದ ನಡುಗಡ್ಡೆಯ ಬಗೀಚದ ಹೂ ಮತ್ತು ಸೀತಾಳ ಬಯಸುತ್ತಾನೆ. ರಾತ್ರಿ ಪೂಜೆ ಮುಗಿಸಿದ ಕಾಳಿ ನಾರಾಯಣನು ಮುಂಜಾನೆ ಪೂಜೆಗೆ ಶಿವ ಬಯಸಿದ ಹೂತರಲು ಹೊರಟು, ಶಿವನಿತ್ತ ಮೂರು ಹರಳುಗಳ ಸಹಾಯದಿಂದ ಹಾಲು ಸಮುದ್ರ, ಕೀಳು ಸಮುದ್ರ ದಾಟಿ ಜಂಬೂದ್ವೀಪಕ್ಕೆ ಬರುತ್ತಾನೆ. ಅಲ್ಲಿಯ ಹೂವುಗಳನ್ನು ಕಿತ್ತು ಹಸಬಿಗೆ ಹಾಕಿಕೊಂಡು, ಜೊತೆಗೆ ಒಂದು ಕಮಳದ ಹೂವನ್ನೂ ಹರಿದುಕೊಂಡನು. ನಂತರ ಬಿಂದಿಗೆಯಲ್ಲಿ ನೀರು ತುಂಬಿಕೊಂಡು ಹಿಂತಿರುಗಿ, ಸೂರ್ಯ ಮೂಡುವ ಮೊದಲೇ ಬಂದು ಶಿವಪೂಜೆ ಮುಗಿಸುತ್ತಾನೆ. ಸೂರ್ಯ ಉದಯಿಸಿ ಮೇಲೇರಿದಂತೆ ಶಿವನ ಬಲ ತೊಡೆಯ ಮೇಲಿದ್ದ ಕಮಲದ ಹೂ ಬಾಯಿ ತೆರೆಧು, ಒಳಗೆ ಕೂಸು ಆಡುತ್ತಿರುವುದು ಗೋಚರವಾಯಿತು. ಗಾಬರಿಗೊಂಡ ಪಾರ್ವತಿಯು ಶಿವನ ಮುಖವನ್ನೊಮ್ಮೆ ಮಗುವಿನ ಮುಖವನ್ನೊಮ್ಮೆ ನೋಡತೊಡಗಿದಾಗ ಶಿವನು ಪಾರ್ವತಿಯ ಉಡಿಯಲ್ಲಿ ಕೂಸನ್ನು ಹಾಕಿ ಜೋಪಾನ ಮಾಡಲು ಹೇಳಿದನು. ಆ ಕೂಸಿಗೆ ಬಾಳ ಭರಮ ಎಂದು ಹೆಸರಿಟ್ಟರು.

ಪಾರ್ವತಿಯ ಜೋಪಾನದಲ್ಲಿ ಬೆಳೆದು ದೊಡ್ಡವನಾದ ಬಾಳ ಭರಮದೇವರಿಗೆ ಮದುವೆ ಮಾಡಲು ಶಿವ ಬಯಸುತ್ತಾನೆ. ಭೂಲೋಕದಲ್ಲಿ ಹೆಣ್ಣು ಹುಡುಕಲು ಕಾಳಿನಾರಾಯಣನ ಜೊತೆ ಮಾತನಾಡಿ ಹೊರಡುತ್ತಾನೆ. ಕಾಳಿನಾರಾಯಣನ ಊರಾದ ನಗರೀ ಪಟ್ಟಣಕ್ಕೆ ಬಂದು ನಂದಿಯನ್ನು ಮುಂದೆ ಬಿಡುತ್ತಾರೆ. ನಂದಿಯು ಕಾಳಿನಾರಾಯಣನ ಮನೆಯಂಗಳ ಹೊಕ್ಕು ನಿಂತ ಕಾರಣ ಅವನ ತಂಗಿ ಸೂರಮ್ಮ ದೇವಿಯನ್ನು ಬಾಳಭರಮನಿಗೆ ಮದುವೆ ಮಾಡುತ್ತಾರೆ. ತನ್ನ ತಂಗಿ ಸುಖವಾಗಿರಲೆಂದು ಕಾಳಿನಾರಾಯಣನು ಚಂದನಗಿರಿಯನ್ನೇ ಕಾಣಿಕೆಯಾಗಿ ಕೊಡುತ್ತಾನೆ. ಅಲ್ಲಿನ ಅರಮನೆಯಲ್ಲಿ ಅವರೀರ್ವರೂ ವಾಸಿಸತೊಡಗುತ್ತಾರೆ.

---

## ೩. ಕಾಳನಾರಾಯಣದೇವರ ವೃತ್ತಾಂತ

ಹೊಸದಾಗಿ ಮದುವೆಯಾದ ತಂಗಿ ಸೂರಮ್ಮದೇವಿಯನ್ನು ದೊಡ್ಡ ಹಬ್ಬವಾದ ಎಳ್ಳಾಮವಾಸ್ಯೆಗೆ ತವರಿಗೆ ಕರೆತರುತ್ತಾರೆ. ಪದ್ಧತಿಯಂತೆ ಹೊಲದಲ್ಲಿ ಚರಗ ಚೆಲ್ಲಲು ಸೂರಮ್ಮದೇವಿ ಹೊರಟಾಗ ಅಣ್ಣ ಕಾಳಿನಾರಾಯಣ ಜೊತೆಯಲ್ಲಿ ಹೋಗಲಿಲ್ಲ. ಇವಳಹಾಗೆ ಚರಗ ಚೆಲ್ಲಲು ಬಂದ ಊರಿನ ಹೆಣ್ಣು ಮಕ್ಕಳೆಲ್ಲ ಅಣ್ಣ ತಮ್ಮಂದಿರೊಡನೆ ಬಂದು ಉಲ್ಲಾಸದಿಂದ ಚರಗ ಚೆಲ್ಲಿ, ಕಬ್ಬು, ಕಾಯಿಯೊಡನೆ ಮನೆಗೆ ಮರಳಿದ್ದನ್ನು ಕಂಡ ಸೂರಮ್ಮದೇವಿ ಮರುಗಿ ಕಣ್ಣೀರಿಟ್ಟಳು.

ಮಾರನೆಯ ದಿನ ಕಾಳಿನಾರಾಯಣನು ಶಿವಪೂಜೆಗೆ ಹೋಗುವ ಮುನ್ನ ತೋಟಕ್ಕೆ ಬಂದಾಗ, ಗಿಡದಿಂದ ಹೂಗಳೆಲ್ಲಾ ಉದುರಿರುವುದನ್ನು ಕಂಡನು. ಗುಂಡಿಯಲ್ಲಿನ ನೀರೆಲ್ಲಾ ಬತ್ತಿಹೋಗಿ ತಳದಲ್ಲಿ ಸ್ವಲ್ಪವೇ ಇರುವುದನ್ನು ನೋಡಿದನು. ಬಿದ್ದ ಹೂಗಳನ್ನೇ ಆಯ್ದುಕೊಂಡು, ಇದ್ದ ತಳದ ನೀರನ್ನೇ ಬಿಂದಿಗೆಯಲ್ಲಿ ತುಂಬಿಕೊಂಡು ಬಂದು ಶಿವಪೂಜೆ ಮುಗಿಸಿ, ಹೀಗಾಗಲು ಕಾರಣವನ್ನು ಶಿವನಲ್ಲಿ ವಿಚಾರಿಸಿದನು. ನಿನ್ನ ತಂಗಿ ಕಣ್ಣೀರು ಹಾಕಿದ್ದರಿಂದ ಹೀಗೆ ಆಗಿದೆಯೆಂದೂ, ಇದು ನೀನು ಮಾಡಿದ ಪಾಪವೆಂದು ಹೇಳಿದ ಶಿವನು ಅದರ ಪರಿಹಾರಕ್ಕೆ ಕಾಶಿಗೆ ಹೋಗಿ ಬರಲು ತಿಳಿಸಿದನು. ಕಾಳಿನಾರಾಯಣ ಕಾಶಿಗೆ ಹೋಗಿ ಬರುವವರೆಗೆ ಬಾಳಭರಮದೇವರು ಶಿವ ಪೂಜೆ ಮಾಡುತ್ತಿರುವಂತೆ ಒಪ್ಪಿಸಲಾಯಿತು.

ಜಂಬೂದ್ವೀಪದಲ್ಲಿನ ಆಗ ಬಿತ್ತಿ ಆಗ ಬೆಳೆಯುವ ಹೂವಿನ ಬೀಜಗಳನ್ನು ತಂದು, ಅವುಗಳ ಹೂವಿನಿಂದ ತನ್ನನ್ನು ಪೂಜಿಸಬೇಕೆಂದು ಬಾಳಭರಮದೇವರಿಗೆ ಶಿವನು ಹೇಳುತ್ತಾನೆ. ಜಂಬೂದ್ವೀಪಕ್ಕೆ ಹೋಗಲು ಸಹಾಯಕ್ಕಾಗಿ ಶಿವನು ಮೂರು ಹರಳುಗಳನ್ನು ಬಾಳಭರಮದೇವರಿಗೆ ಕೊಡುತ್ತಾನೆ. ಹರಳುಗಳ ಸಹಾಯದಿಂದ ಭರಮನು ಹಾಲ ಸಮುದ್ರ, ಕೀಲು ಸಮುದ್ರ ದಾಟಿ ಜಂಬೂದ್ವೀಪಕ್ಕೆ ಹೋದನು. ಅಲ್ಲಿ ಈಜಾಡುತ್ತಿದ್ದ ಏಳು ಜನ ಜಲಕನ್ಯೆಯರಿಗೆ ತನ್ನ ಪರಿಚಯ ಹೇಳಿದನು. ಅವರು ಬಾಳಭರಮನ ತಾಯಿ ಕಮಳಾದೇವಿ ಮತ್ತು ಅವಳ ಆರು ಜನ ಸಹೋದರಿಯರೇ ಆಗಿದ್ದರು. ಬಾಳಭರಮನು ತನ್ನ ಮಗನೆಂದು ಕಮಳಾದೇವಿ ಹೇಳಿದಳು. ಏಳುಜನ ಅಕ್ಕತಂಗಿಯರು ತಾವು ಮುಡಿಯುವ ಆಗ ಬಿತ್ತು ಆಗ ಬೆಳೆವ ಹೂವಿನ ಗಿಡಗಳ ಬೀಜಗಳನ್ನು ಭರಮನಿಗೆ ಕೊಟ್ಟರು. ಮಣ್ಣಿನೊಡನೆ ಮೊಲೆಹಾಲನ್ನು ಬೆರೆಸಿ ಹಾಲುಗುಂಬಳಕಾಯಿ

ಸೃಷ್ಟಿಸಿ ಮಗನ ಬೆನ್ನಿಗೆ ಕಟ್ಟಿ, ಅದರ ಸಹಾಯದಿಂದ ಸಮುದ್ರ ದಾಟಲು ಹೇಳಿ ಕಳುಹಿಸಿದರು. ಬಾಳಭರಮನು ಹಿಂದಿರುಗಿ ಬಂದು ಹೂವಿನ ಬೀಜಗಳನ್ನೂರಿ, ಬೆಳೆದ ಸಸಿಯಲ್ಲಿ ಅರಳಿದ ಹೂವುಗಳಿಂದ ಶಿವನ ಪೂಜೆ ಮಾಡಿದ್ದರಿಂದ, ಶಿವ ಪ್ರಸನ್ನನಾಗಿ ಇನ್ನು ಮುಂದೆ ಬೇರೆ ಯಾರಿಗೂ ಅವಕಾಶಕೊಡದೆ ನೀನೇ ಪೂಜೆಮಾಡು ಎಂದು ಹೇಳಿದನು.

ಒಂಬತ್ತು ತಿಂಗಳು ಕಾಶಿಯಾತ್ರೆ ಮುಗಿಸಿ ಹಿಂತಿರುಗಿ ಬಂದ ಕಾಳಿನಾರಾಯಣನು ಶಿವ ಪೂಜೆಗೆ ಬಂದಾಗ ಸೇವಕರು ಅವನನ್ನು ಒಳಗೆ ಬಿಡಲಿಲ್ಲ. ತಾನು ಮೂರು ಮಾತು ಹೇಳಿ ಹೋಗುವುದಾಗಿ ವಿನಂತಿಸಿಕೊಂಡಿದ್ದರಿಂದ ಅವನನ್ನು ಶಿವನು ಒಳಗೆ ಬರ ಮಾಡಿಕೊಳ್ಳುತ್ತಾನೆ. ಶಿವನ ಮುಂದೆ ನಿಂತ ಕಾಳಿನಾರಾಯಣನು, ಮುಂಜಾನೆ ಎದ್ದು ಒಣಗಿಡ ನೋಡಬಾರದು, ಕುಳಬಾನ ನೋಡಬಾರದು, ಬಂಜೆಯ ಮುಖ ಕಾಣಬಾರದು ಎಂದು ಹೇಳುತ್ತಾನೆ. ಈ ಮಾತುಗಳನ್ನು ಗಮನಿಸಿದ ಶಿವನು ಬರಮ ದೇವರಿಗೆ ಬದಲಾಗಿ ಕಾಳಿನಾರಾಯಣನೇ ತನ್ನ ಪೂಜೆಗೆ ಬರಲು ತಿಳಿಸುತ್ತಾನೆ. ನಿರಾಸೆಗೊಂಡ ಬಾಳಭರಮನು ಶಿವಪೂಜೆಗೆ ತಂದಿದ್ದ ಹೂವು ಮತ್ತು ನೀರನ್ನು ತೆಗೆದುಕೊಂಡು ಹೋಗಿ ಎತ್ತುಗಳಿಗೆ ಪೂಜೆ ಮಾಡುತ್ತಾನೆ. ಆ ದಿನ 'ಕಾರುಣವಿ' ಎಂದು ಕರೆಸಿಕೊಳ್ಳುತ್ತದೆ. ತರುವಾಯ ಭರಮನು ಮನೆಗೆ ಬಂದು ಕಂಬಳಿ ಮುಸುಕು ಹಾಕಿ ಮಲಗಿ ಬಿಡುತ್ತಾನೆ.

## ೪. ಬೀರಪ್ಪನ ಜನನ ವೃತ್ತಾಂತ

ಭರಮದೇವರು ಕಂಬಳಿ ಮುಸುಕು ಹಾಕಿ ಮಲಗಿದ ಕಾರಣ ತಿಳಿದು ಸೂರಮ್ಮದೇವಿ ಸಂಕಟಪಟ್ಟಳು. ಶಿವನಲ್ಲಿಗೆ ಹೋಗಿ ವ್ರತ ಹಿಡಿದು ಹಟ ಮಾಡಿ ನಿಂತಳು. ಕೊನೆಗೆ ಅವಳ ಹಟಕ್ಕೆ ಮಣಿದು ತನ್ನ ಬೆವರನ್ನೇ ಬಟ್ಟಲಲ್ಲಿ ತುಂಬಿ ಕೊಟ್ಟು, ಅದನ್ನು ಗಂಡ-ಹೆಂಡಿರಿಬ್ಬರೂ ಸೇವಿಸಿದರೆ ಒಂದು ಗಂಡು ಮಗುವಾಗುವುದೆಂದು, ತಾನೆ ಮಗನಾಗಿ ಅವತರಿಸುವೆನೆಂದು ಹೇಳಿದನು. ಆದರೆ ಆ ಮಗುವನ್ನು ಹುಟ್ಟಿದ ಹದಿಮೂರನೇ ದಿನ ಅಡವಿಗೆ ಸಾಗಿಸಬೇಕೆಂದು ತಿಳಿಸಿದನು. ಮನೆಗೆ ಬಂದ ಸೂರಮ್ಮದೇವಿ ಮಡಿಯಾಗಿ ಗಂಡ ಹೆಂಡಿರಿಬ್ಬರೂ ಬಟ್ಟಲ ಬೆವರನ್ನು ಸೇವಿಸಿದ್ದರಿಂದ ಆಕೆ ಗರ್ಭಧರಿಸುತ್ತಾಳೆ.

ಸೂರಮ್ಮದೇವಿಗೆ ಐದು ತಿಂಗಳು ತುಂಬುವಾಗ ನಗರೀ ಪಟ್ಟಣದಿಂದ ಚಂದನಗಿರಿಗೆ

ಬಳೆಗಾರ ಬಾಬಣ್ಣ ಬರುತ್ತಾನೆ. ತಾನು ತವರಿನ ಬಾನದ ಬುತ್ತಿ ಬಯಸಿರುವ ಸುದ್ದಿಯನ್ನು ಅಣ್ಣ ಕಾಳಿನಾರಾಯಣನಿಗೆ ಅವನೊಡನೆ ಹೇಳಿಕಳುಹಿಸುತ್ತಾಳೆ. ಈ ಸುದ್ದಿ ಕೇಳಿ ಕಾಳಿನಾರಾಯಣ ಭಯಗೊಳ್ಳುತ್ತಾನೆ. ತನ್ನ ತಂಗಿಗೆ ಹುಟ್ಟುವ ಮಗು ಹೆಣ್ಣಾಗಲಿ, ಗಂಡಾಗಲಿ ತನಗೆ ಕೇಡು ಎಂಬುದು ಅವನಿಗೆ ಗೊತ್ತಿದ್ದ ಭವಿಷ್ಯ ಜ್ಞಾನದಿಂದ ತಿಳಿದ ಕಾರಣ ಗರ್ಭದಲ್ಲಿನ ಕೂಸನ್ನು ಕೊಲ್ಲಲು ಯೋಚಿಸಿ, ವಿಷದ ಬುತ್ತಿ ತಯಾರಿಸಿ, ವಿಷದ ಸೀರೆ, ಕುಪ್ಪಸಗಳೊಂದಿಗೆ ತಾನೇ ತಂಗಿ ಮನೆಗೆ ಹೊರಡುತ್ತಾನೆ.

ಸೂರಮ್ಮದೇವಿಯ ಕನಸಿನಲ್ಲಿ ಗರ್ಭದ ಕೂಸು ಮಾತನಾಡಿ ನಿಮ್ಮ ಅಣ್ಣ ತರುವ ಬಾನದ ಬುತ್ತಿ, ಸೀರೆ, ಕುಪ್ಪಸ ವಿಷಮಯವಾಗಿದೆ. ಊಟ ಮಾಡುವ ಮೊದಲು ಒಂದು ತುತ್ತು ನಾಯಿಗೆ ಹಾಕು. ಸೀರೆ ಕುಪ್ಪಸ ಉಡುವ ಮುನ್ನ ಕಟ್ಟಿಗೆ ಕುದುರೆಗೆ ಹಾಕು, ನಾಗೊಂದಿಗೆ ಹಾಕು. ಕುಂಕುಮ, ಜಾಜೇಲಿಗಳೂ ವಿಷಗಳೇ, ನೀನು ಹಚ್ಚಿಕೊಳ್ಳುವ ಮುನ್ನ ಕಟ್ಟಿಗೆ ಕುದುರೆಯ ಹಣೆಗೆ, ಹಲ್ಲಿಗೆ ಹಚ್ಚು. ಕಟ್ಟಿಗೆಯ ಕುದುರೆ, ನಾಗೊಂದಿಗೆಗಳಿಗೆ ಉರಿ ಹತ್ತುವುದು. ನೀರು ಹೊಡೆದು ಆರಿಸು. ಕುಂಕುಮ, ಜಾಜೇಲಿ ಹಚ್ಚಿದ ಕಟ್ಟಿಗೆ ಕುದುರೆ ಹಣೆ, ಹಲ್ಲುಗಳಿಗೆ ತೂತು ಬೀಳುತ್ತವೆ - ಎಂದು ಹೇಳಿದ್ದು ಕಂಡು ಗಾಬರಿಗೊಳ್ಳುತ್ತಾಳೆ.

ಅಣ್ಣ ತಂದ ಬುತ್ತಿಯನ್ನು ಬಿಚ್ಚಿ ನಾಯಿ ಬೆಕ್ಕುಗಳಿಗೆ ಹಾಕಿದಾಗ ಅದನ್ನು ತಿಂದ ಅವು ಸಾವನ್ನಪ್ಪುತ್ತವೆ. ಗರ್ಭಧರಿಸಿದ ಅವುಗಳ ಕಂದಮ್ಮಗಳು ಹೊರಬರುತ್ತವೆ. ಸೀರೆ, ಕುಪ್ಪಸಗಳನ್ನು ಕಟ್ಟಿಗೆ ಕುದುರೆ, ನಾಗೊಂದಿಗೆಗಳಿಗೆ ಹಾಕಿದಾಗ ಅವು ಕೂಡಲೇ ಬೆಂಕಿ ಹತ್ತಿ ಉರಿಯುತ್ತವೆ. ಕೂಡಲೇ ನೀರು ಸಿಂಪಡಿಸಿ ನಂದಿಸುತ್ತಾಳೆ. ತನ್ನ ತಾಯಿ ತಂದೆಯರ ಹಿಂದೆಯೇ ತವರೂ ಹೋಯಿತೆಂದು ದುಃಖಿಸುತ್ತಾಳೆ. ಅಣ್ಣ ತಂದ ಬುತ್ತಿಯನ್ನು ಹಿತ್ತಲಲ್ಲಿ ಎಸೆಯುತ್ತಾಳೆ. ಗುರು ರೇವಣಸಿದ್ಧರು ನಗರೀ ಪಟ್ಟಣಕ್ಕೆ ಹೋಗಿ ಕಾಳಿನಾರಾಯಣನ ಎಮ್ಮೆಗಳನ್ನು ಚಂದನಗಿರಿಗೆ ಹೊಡೆದು ತಂದು ಸೂರಮ್ಮದೇವಿ ಹಿತ್ತಲಲ್ಲಿ ಎಸೆದಿದ್ದ ಬುತ್ತಿಯನ್ನು ತಂದು ಅವುಗಳಿಗೆ ಹಾಕುತ್ತಾನೆ. ಎಮ್ಮೆಗಳು ತಿಂದು ಸಾಯುತ್ತವೆ. ತಂಗಿಯ ಮನೆಯಲ್ಲಿ ಉಳಿದಿದ್ದ ಕಾಳಿನಾರಾಯಣ ಮುಂಜಾನೆ ಬಹಿರ್ದಶೆಗೆ ಹೋಗುವಾಗ ತನ್ನ ಎಮ್ಮೆಗಳೆಲ್ಲಾ ಸತ್ತುಬಿದ್ದಿರುವುದನ್ನು ಕಂಡು ಕೂಡಲೆ ಊರಿಗೆ ಹೊರಟನು. ಚಂದನಗಿರಿಯಲ್ಲಿ ಸೂಲಗಿತ್ತಿಯರಿಲ್ಲವೆಂದು ತಂಗಿ ಹೇಳಿದಾಗ

ಕಾಳಿನಾರಾಯಣ ತಮ್ಮ ಊರಿನಿಂದ ಸೂಲಗಿತ್ತಿಯರನ್ನು ಕಳುಹಿಸಿ ಬಾಣಂತನ ಮಾಡಿಸುವುದಾಗಿ ಹೇಳಿ ಹೋದನು. ಅನಂತರ ಸೂರಮ್ಮದೇವಿ ಬೇರೆ ಅಡುಗೆ ಮಾಡಿ ತವರಿನ ಬುತ್ತಿ ಎಂದು ಊರಿಗೆಲ್ಲಾ ನೀಡಿದಳು.

ತಂಗಿಯ ಹೆರಿಗೆ ಸಮೀಪಿಸುತ್ತಿದ್ದಂತೆ ಮೂರು ಜನ ಸೂಲಗಿತ್ತಿಯರಿಗೆ ಉಕ್ಕಿನ ಉಗುರು ಹಾಕಿಸಿ, ಮೂಲಿಕುಂಚಿಗಿ ಕೊಟ್ಟು ಚಂದನಗಿರಿಗೆ ಕಳುಹಿಸುತ್ತಾನೆ. ಸೂರಮ್ಮದೇವಿಗೆ ಹೆರಿಗೆ ಬೇನೆ ಕಾಣಿಸಿದ್ದರಿಂದ ಭರಮದೇವರು ಮನೆ ಮನೆ ಸುತ್ತಿ ಮುದುಕಿಯರನ್ನು ಕರೆತರುವ ವೇಳೆಗೆ ಈ ಸೂಲಗಿತ್ತಿಯರು ಮನೆಯ ಮುಂದೆ ಬರುತ್ತಾರೆ. ಎಲ್ಲರನ್ನೂ ಹೊರಕ್ಕೆ ಕಳುಹಿಸಿದ ಈ ಸೂಲಗಿತ್ತಿಯರು ಚೊಚ್ಚಲ ಹೆರಿಗೆಯಾದ್ದರಿಂದ ಬಾಣಂತಿಗೆ ಕಣ್ಣುಕಟ್ಟಬೇಕೆಂದು ಸೂರಮ್ಮದೇವಿಯ ಕಣ್ಣಿಗೆ ಬಟ್ಟೆ ಕಟ್ಟುತ್ತಾರೆ. ಕೈ ಬೆರಳುಗಳಿಗೆ ಉಕ್ಕಿನ ಉಗುರುಗಳನ್ನು ಹಾಕಿಕೊಂಡು ಕೂಸು ಜನಿಸುವಾಗಲೇ ಚಿವುಟಿ ಹಾಕಲು ಸಂಚು ಮಾಡಿ ಕೂರುತ್ತಾರೆ. ಇವರ ತಯಾರಿಯನ್ನು ಗರ್ಭದ ಶಿಶು ಗಮನಿಸುತ್ತದೆ. ಒಮ್ಮೆಗೆ ಕೋಲ್ಮಿಂಚು ಹೊಡೆದಂತಾಗಿ ಗರ್ಭದಿಂದ ಹೊರೆಗೆ ಹಾರಿ ಬೀರಪ್ಪ ನಿಂತು, ಸೂಲಗಿತ್ತಿಯರ ಟೊಂಕಕ್ಕೆ, ಬಾಯಿಗೆ ಒದೆಕೊಡುತ್ತಾನೆ. ಅವರು ಓಡಿಹೋದ ಮೇಲೆ ಲಿಂಗ ಬೀರಣ್ಣ ಕೂಸಾಗಿ ತಾಯಿಯ ಮಗ್ಗುಲಲ್ಲಿರುತ್ತಾನೆ. ಸೂರಮ್ಮದೇವಿ ಗಂಡನನ್ನು ಕೂಗಿ ಕರೆದಾಗ, ಬಂದ ಭರಮದೇವರು ಹೊಳೆಯುತ್ತಿರುವ ಕೂಸನ್ನು ಕಂಡು ಹೆಂಡತಿಯ ಕಣ್ಣಿನ ಬಟ್ಟೆ ಬಿಚ್ಚುತ್ತಾನೆ. ನೆರೆಹೊರೆಯ ಹಿರಿಯ ಹೆಣ್ಣು ಮಕ್ಕಳು ಬಂದು ಬಾಣಂತಿಗೆ, ಕೂಸಿಗೆ ನೀರೆರೆದು ಉಪಚರಿಸುತ್ತಾರೆ.

ಸೂಲಗಿತ್ತಿಯರಿಗೆ ಒದಗಿದ ದುಃಸ್ಥಿತಿಗೆ ಕಾಳಿನಾರಾಯಣನು ಮರುಗುತ್ತಾನೆ. ಅವರಿಂದ ಎಲ್ಲಾ ಸಮಾಚಾರ ತಿಳಿದು ಇದು ಹುಟ್ಟಿದ ಸೋದರಳಿಯನ ಲೀಲೆಯೆಂದು ತಿಳಿದು ಕಣ್ಣೀರು ತಂದು ಕೊಳ್ಳುತ್ತಾನೆ. ತಂಗಿಯ ಮಗುವನ್ನು ಕೊಲ್ಲಲು ಏನಾದರೂ ಮಾಡಬೇಕೆಂದು ತಾನೇ ಕುದುರೆಯೇರಿ ಚಂದನಗಿರಿಗೆ ಬರುತ್ತಾನೆ. ಊರ ಹೊರಗೆ ವೇಷ ಮರೆಸಿಕೊಂಡು ಕಣಿ ಹೇಳುತ್ತಾ ಊರೊಳಗೆ ಬರುತ್ತಾನೆ. ಕೂಸು ಹುಟ್ಟಿದ ಗಳಿಗೆ ಸರಿಯಾಗಿಲ್ಲವೆಂದೂ, ತಂದೆ ತಾಯಿ, ಸೋದರಮಾವ ಹಾಗೂ ದೇಶದ ಜನಗಳಿಗೆ ತೊಂದರೆಗಳುಂಟಾಗುತ್ತವೆಂದು ಹೇಳುತ್ತಾನೆ. ಕೂಸು ವನಸೇರುವುದೆಂಬ ನುಡಿಯಿಂದ ಸಿಟ್ಟುಗೊಂಡ ಸೂರಮ್ಮ ದೇವಿ ತನ್ನ ಅಣ್ಣ ಒಳ್ಳೆಯ

ಭವಿಷ್ಯಗಾರನೆಂದು, ಅವನನ್ನು ಕರೆಸಿ ಮಗುವಿನ ಭವಿಷ್ಯ ಕೇಳುವೆನೆಂದು ಹೇಳುತ್ತಾಳೆ. ಅಲ್ಲಿಂದ ಹೊರಟುಹೋದ ಕಾಳಿನಾರಾಯಣ ಊರ ಹೊರಗೆ ತನ್ನ ವೇಷ ಕಳಚಿ ತಂಗಿಯ ಮನೆಗೆ ಬಂದು ಕೂಸನ್ನು ನೋಡಿ ಕಾಲು ಮುಂದಾಗಿ ಹುಟ್ಟಿರುವುದರಿಂದ ತಾಯಿ ತಂದೆಗೆ, ಸೋದರ ಮಾವನಿಗೆ, ಭೂಮಿ ಸೀಮೆ, ರೈತ, ರಾಣೀರೆಲ್ಲರಿಗೂ ಕೇಡುಂಟೆಂದು ಹೇಳುತ್ತಾನೆ. ಇದರಿಂದ ಪಾರಾಗಲು ಕೂಸನ್ನು ಹುಟ್ಟಿದ ಹದಿಮೂರನೆ ದಿನ ಅಡವಿಪಾಲು ಮಾಡಲು ತಿಳಿಸುತ್ತಾನೆ. ಕೂಸನ್ನು ಅಡವಿಗೆ ಸಾಗಿಸಲು ತನ್ನ ಬಳಿಯಿರುವ ನಾಲ್ಕು ಮಂದಿ ಮಶ್ಯಾಳರನ್ನು (ಬಲಶಾಲಿಗಳನ್ನು) ಕಳುಹಿಸುವುದಾಗಿ ಹೇಳುತ್ತಾನೆ. ನಗರೀ ಪಟ್ಟಣಕ್ಕೆ ಬಂದು ಮಶ್ಯಾಳರನ್ನು ಕರೆಸಿ, ತನ್ನ ತಂಗಿಯ ಕೂಸಿನ ತೊಟ್ಟಿಲನ್ನು ಕೊದಲಗಿ ನಂದನ ಬನಕ್ಕೆ ಸಾಗಿಸಿ,. ಅಲ್ಲಿ ಕೂಸಿನ ಚಂಡು ಕಡಿದು ತರುವಂತೆ ಆಜ್ಞಾಪಿಸುತ್ತಾನೆ.

ಸೂರಮ್ಮದೇವಿ ತೊಟ್ಟಿಲನ್ನು ಪೂಜಿಸಿ, ಕೂಸನ್ನಿಟ್ಟು ಬನಕ್ಕೆ ಸಾಗಿಸಲು ಬಂದ ಮಶ್ಯಾಳರಿಗೆ ಹೇಳುತ್ತಾಳೆ. ಆದರೆ ಎಷ್ಟು ಪ್ರಯತ್ನಿಸಿದರೂ ತೊಟ್ಟಿಲನ್ನು ಮೇಲೆತ್ತಲು ಸಾಧ್ಯವಾಗಲಿಲ್ಲ. ತಾಯಿ ಮಗುವನ್ನು ಮುದ್ದಾಡಿ, ಹಾಲು ಕುಡಿಸಿ ತೊಟ್ಟಿಲಿಗೆ ಹಾಕಿದಾಗ, ತೊಟ್ಟಿಲಿಗೆ ಕೈ ಹಾಕಿದ ಕೂಡಲೆ ಅದು ಮೇಲೆದ್ದು, ಮಶ್ಯಾಳರು ಹೆಗಲ ಮೇಲೆ ಹೊತ್ತುಕೊಂಡಿದ್ದರೂ ಹೆಗಲ ಮೇಲೆ ಸ್ವಲ್ಪ ಅಂತರದಲ್ಲಿಯೇ ಚಲಿಸಿದಂತಾಯಿತು. ಕಾಡಿಗೆ ಹೊತ್ತು ಬಂದವರಿಗೆ ಹಸಿವು ಅಧಿಕವಾದುದರಿಂದ ತೊಟ್ಟಿಲಲ್ಲಿದ್ದ ನೈವೇದ್ಯವನ್ನೇ ತಿಂದರೂ, ಅದು ಕರಗದೆ ಇದ್ದಷ್ಟೇ ಇತ್ತು. ಎಷ್ಟು ನೀರು ಕುಡಿದರೂ ಖಾಲಿಯಾಗಲಿಲ್ಲ. ಅವರು ಆಶ್ಚರ್ಯಚಕಿತರಾಗಿ, ತಾವು ತಿಂದ ಅನ್ನದ ಋಣಕ್ಕೆ ಮಗುವನ್ನು ಕೊಲ್ಲದೆ ಒಣಗಿದ ಆಲದಮರದ ಟೊಂಗೆಗೆ ತೊಟ್ಟಿಲು ಕಟ್ಟಿ, ಬಿಸಿಲ ತಾಪಕ್ಕೆ ಅದು ಸಾಯುತ್ತದೆಂದು ಭಾವಿಸಿದರು. ರಕ್ತ ಹೊನ್ನಿ ಗಿಡವನ್ನು ಕಡಿದು ಅದರ ಬೊಡ್ಡೆಯಿಂದ ಕೂಸಿನ ಆಕಾರ ನಿರ್ಮಿಸಿ, ಕುತ್ತಿಗೆ ಕತ್ತರಿಸಿ ಕಾಳಿನಾರಾಯಣನಿಗೆ ಅದನ್ನು ತೋರಿದರು. ಹೊನ್ನಿ ಮರದಿಂದ ಒಸರಿದ ಹನಿಯನ್ನೂ ಕೂಸಿನ ರಕ್ತದ ಟಳ್ಳಿಯೆಂದು ಅವನ ಹಣೆಗಿಟ್ಟರು. ಕಾಳಿನಾರಾಯಣನು ಕೂಸಿನದೆಂದು ಭಾವಿಸಿ ಹೊನ್ನಿನ ಗಿಡದ ಚೆಂಡನೊಯ್ದು ಬಚ್ಚಲ ಮೋರಿ ತುರುಕಿ ಜಳಕ ಮಾಡಿದನು. ಈ ಸಂತೋಷದಲ್ಲಿ ಮಾಂಸದ ಅಡುಗೆ ಮಾಡಿಸಿ ಊಟ ಮಾಡಿದನು.

---

ಆಕಾಶ ಮಾರ್ಗದಲ್ಲಿ ಬರುತ್ತಿದ್ದ ಶಿವ ಪಾರ್ವತಿಯರಿಗೆ ಕೂಸಿನ ಅಳು ಧ್ವನಿ ಕೇಳಿಸಿ ಅಲ್ಲಿಗೆ ಬರುತ್ತಾರೆ. ಕೂಸಿನ ಸೌಂದರ್ಯ ಕಂಡ ಪಾರ್ವತಿ ಬೆವರುತ್ತಾಳೆ. ತನ್ನ ಮೈಯ ಬೆವರಿನ ಮಣ್ಣಿನಿಂದ ಹುಳುಗಳನ್ನು ಮಾಡುತ್ತಾಳೆ. ಶಿವನು ಅವಕ್ಕೆ ಜೀವ ತುಂಬಿದಾಗ ಜೇನು ಹುಳುಗಳಾಗುತ್ತವೆ. ಜೇನಿಗೂ ಮಗುವಿನ ಬಟ್ಟಿಗೂ ಸಂಬಂಧ ಮಾಡುತ್ತಾರೆ. ಇರುವೆಯ ದಂಡು ಕೂಸಿನ ಕಾವಲಿಗೆ ನಿಲ್ಲುತ್ತವೆ. ನಾಗ ತನ್ನ ಹೆಡೆ ಎತ್ತಿ ಕೂಸಿಗೆ ಬಿಸಿಲು ಬೀಳದಂತೆ ಮಾಡುತ್ತದೆ. ಒಣಗಿದ್ದ ಕಂಚಿನ ಆಲದಮರ ಚಿಗುರೊಡೆದುದನ್ನು ಕಂಡು ಶಿವ ಪಾರ್ವತಿಯರು ಸಂತೋಷದಿಂದ ಹಿಂದಿರುಗುತ್ತಾರೆ.

### ೫. ಅಕ್ಕವ್ವ ಮಾಯವ್ವರ ವೃತ್ತಾಂತ

ದೇವಗಿರಿಯ ಅರಸ ಗೌಡ ದೇವೇಂದ್ರರಾಯ ಮತ್ತು ಮಡದಿ ಸುಭದ್ರೆಗೆ ಆರು ಹೆಣ್ಣು ಮಕ್ಕಳಿದ್ದು ಏಳನೆಯದಾಗಿ ಮಾಯವ್ವ ಜನಿಸುತ್ತಾಳೆ. ಕೂಸಿನ ಜನನದ ಬಗೆಗೆ ಪಂಚಾಂಗ ತೆಗೆಸಿ ನೋಡಲಾಗಿ ತಂದೆ ತಾಯಿಗೆ ಕೇಡು, ಅರಸೊತ್ತಿಗೆಗೆ ಕೇಡು ಎಂದು ತಿಳಿಯುತ್ತದೆ. ಅದಕ್ಕಾಗಿ ಹನ್ನೊಂದನೆ ದಿನಕ್ಕೆ ಬಂಗಾರದ ಪೆಟ್ಟಿಗೆಯಲ್ಲಿ ಹಾಕಿ ಹೊಳೆಯಲ್ಲಿ ತೇಲಿ ಬಿಟ್ಟರು. ತೇಲುತ್ತಾ ಬಂದ ತೆಪ್ಪ ತೆರೆಗಳ ಹೊಡೆತಕ್ಕೆ ಸಿಕ್ಕಿ ಹೊಳೆಯ ದಂಡೆಗೆ ಬಂದು ತಲುಪಿತು. ಅಲ್ಲಿ ತಪಸ್ಸು ಮಾಡುತ್ತಿದ್ದ ಸಾಧುಗಳು ಆ ಪೆಟ್ಟಿಗೆಯನ್ನು ತೆಗೆದುಕೊಂಡು, ಅಲ್ಲಿ ಏಳುನೂರು ಕುರಿಗಳನ್ನು ಮೇಯಿಸುತ್ತಿದ್ದ ಏಳು ಹೆಣ್ಣು ಮಕ್ಕಳ ಕೈಗೆ ಕೊಟ್ಟರು. ಈ ಏಳು ಜನವೂ ದಿಬ್ಬಿಯ ದಿಬ್ಬಿರಾಯನ ಮಕ್ಕಳಾಗಿದ್ದರು. ಅದುವರೆಗೆ ಏಳುನೂರು ಕುರಿಗಳು ಗರ್ಭಧರಿಸಿರಲಿಲ್ಲ. ಮಗು ಅವರ ಕೈ ಸೇರಿದ ಕೂಡಲೆ ಎಲ್ಲ ಕುರಿಗಳಲ್ಲಿ ಕಳೆ ಕಟ್ಟಿತು. ಇದು ಮಗುವಿನ ಕಾಲ್ಗುಣವೆಂದು ತಿಳಿದ ದಿಬ್ಬರಾಯ ಹೆಂಡತಿ ಶಾಂತಾಬಾಯಿಯನ್ನು ಕರೆದು ಕೂಸನ್ನು ಅವಳ ಉಡಿಯಲ್ಲಿ ಹಾಕಿದ. ಅವರು ಸಂಭ್ರಮದಿಂದ ಮಗುವಿಗೆ ಮಾಯವ್ವನೆಂದು ಹೆಸರಿಟ್ಟರು.

ದೊಡ್ಡವಳಾದ ಮಾಯವ್ವ ತಂದೆ ಬೇಡವೆಂದರೂ ಕೇಳದೆ ಕುರಿ ಕಾಯಲು ಹಟ ಮಾಡಿದಳು. ಕಾಯಿ ಕೋಲನ್ನು ಹಿಡಿದು ಕುರಿಗಳನ್ನು ಹೊಡೆದುಕೊಂಡು ಕಾಡರುದ್ದರ ಭೂಮಿಗೆ ಬರುತ್ತಾಳೆ. ಈಕೆ ಓಡಾಡುವಾಗ ಕುಂಕುಮದ ಮತ್ತು ಭಂಡಾರದ ಹೆಜ್ಜೆಗುರುತುಗಳು ಮೂಡುತ್ತಿದ್ದವು. ತಂಗಿಯನ್ನು ಹುಡುಕುತ್ತಾ ಕೈಲಾಸದ ಕಡೆಯಿಂದ ಬಂದ ಈಕೆಯ ಆರು ಮಂದಿ ಅಕ್ಕಂದಿರು

ಇವಳ ಕುಂಕುಮದ ಮತ್ತು ಭಂಡಾರದ ಹೆಜ್ಜೆ ಗುರುತುಗಳನ್ನು ಕಾಣುತ್ತಾರೆ. ಹಿರಿಯವಳಾದ ಅಕ್ಕವ್ವ ಇವಳನ್ನು ಅಪ್ಪಿಕೊಂಡು, ನೀನು ನನ್ನ ತಂಗಿಯೆಂದೂ, ನಾವೆಲ್ಲ ಗೋವಿಂದ್ರಾಯನ ಮಕ್ಕಳೆಂದೂ ಹೇಳುತ್ತಾಳೆ. ಸಮಯವಾಯಿತೆಂದು ಉಳಿದವರು ಕೈಲಾಸಕ್ಕೆ ಹಿಂದಿರುಗಿದ್ದರಿಂದ ಮಾಯವ್ವ ಅಕ್ಕನೊಡನೆ ದಿಬ್ಬಿಯ ದಿಬ್ಬರಾಯನಲ್ಲಿಗೆ ಬರುತ್ತಾಳೆ. ಮಾಯವ್ವಳನ್ನು ಪಡೆದ ಮಗಳೆಂದು ಒಪ್ಪಿಕೊಂಡ ದಿಬ್ಬರಾಯನು, ಅಕ್ಕವ್ವ ಮತ್ತು ಮಾಯವ್ವರಿಗೆ ತಲಾ ಮೂವತ್ತೈದು ಕುರಿಗಳನ್ನು ಕೊಡುತ್ತಾನೆ. ಇಬ್ಬರೂ ಚಂದ್ರಗಿರಿಯಲ್ಲಿ ಮನೆ ಕಟ್ಟಿಕೊಂಡು ವಾಸಿಸತೊಡಗುತ್ತಾರೆ.

ಕಾಡುರುದ್ದರ ಭೂಮಿಗೆ ಕುರಿ ಮೇಯಿಸಲು ಹೋದ ತಂಗಿ ಮಾಯವ್ವಗೆ ರೊಟ್ಟಿ ಬುತ್ತಿ ಕಟ್ಟಿಕೊಂಡು ಅಕ್ಕವ್ವ ಬರುತ್ತಾಳೆ. ಇಬ್ಬರೂ ಅಲ್ಲಿದ್ದ ಕಂಚಿನಾಲದ ಮರದ ಕೆಳಗೆ ಊಟ ಮಾಡುತ್ತಾರೆ. ಆಗ ಕೂಸಿನ ಅಳುವ ಶಬ್ದ ಕೇಳಿ ಮರದ ಮೇಲೆ ಗಮನಿಸಿದಾಗ ಬಂಗಾರದ ತೊಟ್ಟಿಲೊಂದು ಕಾಣುತ್ತದೆ. ಅಕ್ಕವ್ವ ಮರಹತ್ತಲು ಪ್ರಯತ್ನಿಸಿದಾಗ ಇರುವೆಗಳು ಏರಗೊಡಲಿಲ್ಲ. ಇರುವೆಗಳಿಗೆ ಸೋಮವಾರ ಸಕ್ಕರೆ ಹಾಕುವುದಾಗಿ ಮಾಯವ್ವ ಹೇಳಿದ್ದರಿಂದ ಆಕೆಗೆ ಮರ ಹತ್ತಲು ದಾರಿಮಾಡಿಕೊಡುತ್ತವೆ. ಮಾಯವ್ವ ತೊಟ್ಟಿಲ ಸಮೀಪಕ್ಕೆ ಬಂದಾಗ ನಾಗರಾಜ ತಡೆಯೊಡ್ಡಲು, ಬಾಗಿಲ ಮೇಲೆ ನಿನ್ನ ಬರೆಸುವೆನೆಂದಾಗ ದಾರಿ ಬಿಟ್ಟಿತು. ಗಿಳಿ ತಡೆಯೊಡ್ಡಿದಾಗ ಕೂಸಿನ ತೊಟ್ಟಿಲಿಗೆ ಗಿಳಿಗಳನ್ನು ಕಳುಹಿಸುವುದಾಗಿ ಹೇಳಿ ದಾರಿ ಬಿಡಿಸಿಕೊಂಡಳು. ಹಗ್ಗ ಕಟ್ಟಿ ತೊಟ್ಟಿಲನ್ನು ಕೆಳಗೆ ಇಳಿಸಿಕೊಂಡರು. ನಂತರ ಇಬ್ಬರೂ ಕೂಸು ತನಗೆ, ನನಗೆ ಎಂದು ಜಗಳ ತೆಗೆದರು. ಅಲ್ಲಿಗೆ ಬಂದ ಎಳ್ಳಿಗುಂಪಿರಾಯಣ್ಣ ಇವರ ವಿವಾದ ಬಗೆಹರಿಸುವುದಾಗಿ ಹೇಳಿದ. ಇಬ್ಬರೂ ತೊಟ್ಟಿಲನ್ನು ಸುತ್ತು ಹಾಕುವುದು. ಆಗ ಯಾರ ಎದೆಬದಿ ಚಿಗುತು ಮೊಲೆಯಲ್ಲಿ ಹಾಲು ಚಿಮ್ಮುವುವೋ ಅವರಿಗೆ ಕೂಸು ಒಪ್ಪಿಸುವುದಾಗಿ ತಿಳಿಸಿದ. ಇಬ್ಬರೂ ಜಳಕ ಮಾಡಿ ಬಂದು, ಮೊದಲು ಹಿರಿಯವಳಾದ ಅಕ್ಕವ್ವ ತೊಟ್ಟಿಲಿಗೆ ಮೂರು ಸುತ್ತು ಬಂದಳು. ಆದರೆ ಎದೆಬದಿ ಚಿಗಿಯಲಿಲ್ಲ. ಮಾಯವ್ವ ತೊಟ್ಟಿಲನ್ನು ಸುತ್ತುಹಾಕಲು ಎದೆಬದಿ ಚಿಗುತು ಬಾಣಂತಿ ಕಳೆಯು ಬಂದಿತು. ಎಳ್ಳಿಗುಂಪಿರಾಯಣ್ಣನು ಮಾಯವ್ವನ ಉಡಿಯಲ್ಲಿ ಕೂಸನ್ನು ಹಾಕಿ 'ಜನಕ ತಮ್ಮನ ಮಾಡಿ, ಮನಕ ಮಗನ ಮಾಡಿ ಸಲವೆಂದು' ಹೇಳಿದ. ಮಾಯವ್ವ ತಮ್ಮನನ್ನು ಮನೆಗೆ ತಂದು ತೊಟ್ಟಿಲು ಕಾರ್ಯಕ್ರಮ ಮಾಡಿ ಲಿಂಗ ಬೀರಣ್ಣನೆಂದು ಹೆಸರಿಟ್ಟಳು.

---

# ೬. ಬಾಲಬೀರಣ್ಣನ ಲೀಲಾ ವೃತ್ತಾಂತ

ಬೀರಣ್ಣನ ಕೋರಿಕೆಯ ಮೇರೆಗೆ ಮಾಯವ್ವ ಬೆಳ್ಳಿಯದಾಂಡು, ಮುತ್ತಿನ ಚಿಣಿ ಮಾಡಿಸಿಕೊಡುತ್ತಾಳೆ. ಊರವರೆಲ್ಲಾ ಒಂದು ಕಡೆ, ಬೀರಣ್ಣ ಒಬ್ಬನೇ ಒಂದು ಕಡೆ ನಿಂತು ಚಿಣಿ ದಾಂಡನಾಡಿ ಗೆಲ್ಲುತ್ತಾನೆ. ಮತ್ತೊಂದು ಸಲ ಚೆಂಡು ದಾಂಡು ಬೇಕೆಂದು ಅಕ್ಕ ಮಾಯವ್ವನಿಗೆ ಹಟ ಮಾಡುತ್ತಾನೆ. ಮಾಯವ್ವ ಉಡಿಯ ತುಂಬ ಮುತ್ತು ರತ್ನ ಒಯ್ದು, ಕುಂಬಾರ ಕಾಳಣ್ಣನಿಗೆ ಕೊಟ್ಟು ತಮ್ಮನಿಗಾಗಿ ಚೆಂಡು ದಾಂಡು ಬೇಡುತ್ತಾಳೆ. ಮಾರನೆ ದಿನಕ್ಕೆ ಬರಲು ಹೇಳಿದ್ದ ಕಾಳಣ್ಣ ಹಿಂದು ಆರು ತಾಸು, ಮುಂದು ಆರು ತಾಸು ಸಮಯದ ಮಧ್ಯರಾತ್ರಿಯಲ್ಲಿ ತಿದಿ ಹೊತ್ತುಕೊಂಡು, ಚೆಂಡು ತಯಾರಿಸುವ ಸಾಮಾಗ್ರಿ, ಮುತ್ತು ರತ್ನಗಳನ್ನು ತೆಗೆದುಕೊಂಡು ಹೆಂಡತಿಯೊಡನೆ ಮೂರು ಊರಿನ ಹಾದಿ ಕೂಡುವ ಸ್ಥಳದಲ್ಲಿ ತಿದಿ ಹೂಡುತ್ತಾನೆ. ಮುತ್ತು ರತ್ನಗಳನ್ನು ಮುಸಿಗೆ ತುಂಬಿ ಸುತ್ತಿಗೆಯಿಂದ ಹೊಡೆವಾಗ ಚೆಂಡು ಹೊಡೆದು ಹೋಗಲು, ಮತ್ತೆ ಎರಡನೆ ಸಾರಿ ಪ್ರಯತ್ನಪಟ್ಟು ವಿಫಲನಾಗಿ, ಮೂರನೆ ಬಾರಿಗೆ ಪ್ರಾಣವನ್ನೇ ಪಣವಾಗಿಟ್ಟು ಚೆಂಡು ತಯಾರಿಸುತ್ತಾನೆ.

ಮಾರನೆ ದಿನ ಕಾಳಣ್ಣನಿಂದ ಪಡೆದ ಚೆಂಡು ದಾಂಡನ್ನು ಮಾಯವ್ವ ಬೀರಣ್ಣನಿಗೆ ನೀಡುತ್ತಾಳೆ. ಮತ್ತೆ ಊರೆಲ್ಲಾ ಒಂದು ಕಡೆ, ಬೀರಣ್ಣ ಮತ್ತೊಂದು ಕಡೆ ಒಬ್ಬನೆ ನಿಂತು ಗೆಲ್ಲುತ್ತಾನೆ. ಬೀರಪ್ಪ ಹೊಡೆದ ಒಂಬತ್ತು ಲಗ್ಗಗಳು ಬೇರೆ ಬೇರೆ ಕಡೆ ಬಿದ್ದು ಅಲ್ಲಲ್ಲಿ ಮಠಗಳಾಗುತ್ತವೆ. ಸಿಡಿಯಾಣ, ಕ್ವಾಣಗನೂರು, ಕರಸೂಣಗಿ, ಗೋಡಗೇರಿ, ಉಂಬರಜ, ಹೂನೂರ, ಆಲಕನೂರ, ಬಾರಾಮತಿ ಹಾಗೂ ತೇರಾಮತಿ ಎಂಬ ಊರುಗಳಲ್ಲಿಯ ಮಠಗಳು ಬೀರಣ್ಣನ ವಾಸಸ್ಥಾನಗಳೆಂದು ಪ್ರಸಿದ್ಧಿ ಪಡೆದಿವೆ. ಈತ ಗೆದ್ದು ಬರುವಾಗ ಚೆಟ್ಟಿ ಸಾಹುಕಾರನ ಮಗ ತನ್ನೊಡನೆ ಆಡಿ ಗೆಲ್ಲುವಂತೆ ಸವಾಲೆಸೆಯುತ್ತಾನೆ. ಆಟದಲ್ಲಿ ಬೀರಣ್ಣನ ಹೊಡೆತಕ್ಕೆ ಸಾಹುಕಾರನ ಮಗ ಸತ್ತು ಹೋಗುತ್ತಾನೆ. ಇದರಿಂದಾಗಿ ಅಕ್ಕ ತಮ್ಮರಿಬ್ಬರೂ ಚಂದನಗಿರಿ ಬಿಟ್ಟು ಬೆಳ್ಳಿಗಿರಿಗೆ ಹೋಗುತ್ತಾರೆ.

ಬೆಳ್ಳಿಗಿರಿಯಲ್ಲಿ ಊರವರೆಲ್ಲ ಬಿಲ್ಲಿನಾಟ ಹೂಡಿರುವಾಗ ಬೀರಣ್ಣನು ಬಾಣ ಬಿಡಲು ಹೋಗಿ ಬಿಲ್ಲು ಮುರಿಯುತ್ತಾನೆ. ಮಾಯವ್ವ ಮಾಡಿಕೊಟ್ಟ ಐದಾರು ಬಿಲ್ಲುಗಳೂ ಮುರಿದು ಹೋಗುತ್ತವೆ. ತಮ್ಮ ಹಟಮಾಡುವಾಗ ಮಾಯವ್ವ ಚಿಂತಿತಳಾಗುತ್ತಾಳೆ. ಐದು ಜನ ಜಕಣಿಯರು ಮಾಯವ್ವಳಿಗೆ ಸಹಾಯ ಮಾಡುವುದಾಗಿ ಹೇಳಿ, ಶಿವನಿಂದ ಬಿಲ್ಲು ಬಾಣಗಳನ್ನು ಬೇಡಿ

ಪಡೆದು ಮಾಯವ್ವನಿಗೆ ನೀಡುತ್ತಾರೆ. ಶಿವನ ಬಿಲ್ಲು ಬಾಣ ಪಡೆದ ಬೀರಣ್ಣ ಅಡವಿಯಲ್ಲಿ ರಾಮರಮಿಕ ಕಂಡು ಬಾಣ ಬಿಡುತ್ತಾನೆ. ಅದು ಬೀರಣ್ಣನ ಪಾದದ ಮೇಲೆ ಬಿದ್ದು, ನಿನ್ನ ಪಾದವನ್ನು ತನ್ನ ತಲೆಯ ಮೇಲಿಟ್ಟಾಗ ಪ್ರಾಣ ಬಿಡ್ತುತ್ತೇನೆಂದು ಹೇಳುತ್ತದೆ. ಬೀರಣ್ಣ ಹಾಗೆಯೇ ಮಾಡಿದಾಗ ಅದು ರಾಮ ರಾಮನೆಂದು ಪ್ರಾಣ ಬಿಡುತ್ತದೆ. ತಮ್ಮನಿಂದ ಈ ವಿಚಾರ ಕೇಳಿದ ಮಾಯವ್ವ, ತಮ್ಮನಿಗೆ ಪಾಪ ಒದಗಿತೆಂದು ಚಡಪಡಿಸಿ, ಸಿದ್ಧರನ್ನು ಊಟಕ್ಕೆ ಕರೆಯಲು ಬಯಸುತ್ತಾಳೆ. ನೀರಿಗಾಗಿ ಬಾವಿಗೆ ಬಂದ ಬಾಲೆಯರ ನೀರಿನ ಕೊಡಗಳಿಗೆ ಬಾಣ ಬಿಟ್ಟು ಕೊಡಗಳನ್ನು ತೂತು ಮಾಡಿದ್ದರಿಂದ ಅವರು ತಂದೆ ತಾಯಿ ಇಲ್ಲದವನೆಂದು ಬೈದದ್ದು ಬೀರಣ್ಣನ ಮನ ನೋಯಿಸಿದವು. ಅವರು ಮಾಯವ್ವನ ಬಳಿ ಬಂದು ಬೀರಣ್ಣನಿಗೆ ನಾರಿ ತರುವಂತೆ ಹೇಳಿದರು.

## ೭. ಲಿಂಗ ಬೀರಣ್ಣನ ಮದುವೆ ವೃತ್ತಾಂತ

ಮಾಯವ್ವ ಬೀರಣ್ಣನಿಗೆ ಮದುವೆ ಮಾಡಲು ಆಲೋಚನೆ ಮಾಡುತ್ತಾಳೆ. ಆದರೆ ಎಲ್ಲಾ ಹೆಣ್ಣುಗಳು ನನಗೆ ಅಕ್ಕನ ರೂಪದಲ್ಲೇ ಕಾಣುವುದರಿಂದ ತಾನು ಸೋದರ ಸೊಸೆಯನ್ನೇ ಮದುವೆಯಾಗಬೇಕೆಂದು ಬೀರಣ್ಣ ಹೇಳುತ್ತಾನೆ. ಆದ್ದರಿಂದ ತನ್ನ ತಂದೆ, ತಾಯಿಯರ ಗುರುತು ಹೇಳುವಂತೆ ಮಾಯವ್ವಳನ್ನು ಒತ್ತಾಯಿಸುತ್ತಾನೆ. ನಾವು ಒಂದುಗೂಡಿದ್ದು ಕೊದಲಿಗಿ ಬನದಲ್ಲಿ, ಆದ್ದರಿಂದ ನಿನ್ನ ತಂದೆ, ತಾಯಿ ಗುರುತು ಹೇಳಲು ಹೇಗೆ ಸಾಧ್ಯವೆಂದು ಪೇಚಾಡುತ್ತಾಳೆ. ಮಾಯವ್ವ ಮಲಗಿದಾಗ ಗುರು ರೋವಣಸಿದ್ಧನು ಕನಸಿನಲ್ಲಿ ಬಂದು ಅಕ್ಕ-ತಮ್ಮಂದಿರ ಸಂಬಂಧಗಳನ್ನು ಅರುಹುತ್ತಾನೆ. ನಗರೀಪಟ್ಟಣದ ಕಾಳಿನಾರಾಯಣನ ಮಗಳು ಕನ್ನಿಕಾದೇವಿ ಬೀರಣ್ಣನ ಸೋದರಸೊಸೆಯೆಂದು ತಿಳಿಸುತ್ತಾನೆ. ತಕ್ಷಣ ಎಚ್ಚೆತ್ತು, ತನ್ನ ಮತ್ತು ಬೀರಣ್ಣನ ಪೂರ್ವಜರ ವೃತ್ತಾಂತವನ್ನು ಹೇಳಿದಾಗ, ಬೀರಣ್ಣ ತನ್ನ ಸೋದರಸೊಸೆಯನ್ನು ಕಾಣಲು ಆತುರವಾಗಿ ಸಿದ್ಧನಾಗುತ್ತಾನೆ.

ನಗರೀಪಟ್ಟಣದ ಸಮೀಪ ಬಂದು ಮುದುಕನ ವೇಷಧರಿಸಿ ದನ ಕಾಯುವ ಮಕ್ಕಳ ಬಳಿಗೆ ಬಂದಾಗ, ಅವರು ಬೀರಣ್ಣನನ್ನು ದನ ಕಾಯಲು ಹಚ್ಚಿ ಆಟದಲ್ಲಿ ತೊಡಗುತ್ತಾರೆ. ಅವನಿಗೆ ರೊಟ್ಟಿ ನೀಡುತ್ತಾರೆ. ಸಂಜೆಯಾಗುತಿದ್ದುದರಿಂದ ಊರ ಬಾಗಿಲು ಹಾಕುತ್ತಾರೆಂಬ ಕಾರಣದಿಂದ ಎಲ್ಲರೂ ಹೊರಟಾಗ, ಬೀರಣ್ಣ ಹುಡುಗರಿಂದ ಊರಿನ ವೃತ್ತಾಂತವನ್ನೆಲ್ಲಾ

ತಿಳಿಯುತ್ತಾನೆ. ಕಾಳಿನಾರಾಯಣ ಊರಿನ ಗೌಡನಾಗಿದ್ದು, ಮಗಳು ಕನ್ನಿಕಾಮವ್ವಳನ್ನು ಏಳಂತಸ್ತಿನ ಮಹಡಿ ಮೇಲೆ ಇಟ್ಟಿರುವುದಾಗಿಯೂ, ಅವಳಲ್ಲಿಗೆ ಬೀರ ಸಂಗವ್ವ ಮಾತ್ರ ಹೋಗುವಳೆಂಬ ಸಂಗತಿ ತಿಳಿಯುತ್ತದೆ. ಹುಡುಗರ ಸಹಾಯದಿಂದ ಬೀರಣ್ಣ ಹೂಗಾರ ಸಂಗವ್ವನ ಮನೆಗೆ ಬರುತ್ತಾನೆ.

ಬೀರಣ್ಣ ಕಟ್ಟಿದ ಭೂಮಿತೂಕದ ಹೂವಿನ ದಂಡೆಯನ್ನು ನೋಡಿ ಸಂಗವ್ವ ಬೆರಗಾಗುತ್ತಾಳೆ. ಹೂವಿನ ದಂಡೆ ತರಲು ತಡವಾದುದೇಕೆಂದು ಕನ್ನಿಕಾಮವ್ವ ಕೇಳಿದರೆ, ಮನೆಗೆ ತಂಗಿಯ ಮಗಗಳು ಬಂದಿದ್ದಾಳೆಂದು ಹೇಳುವಂತೆ ತಿಳಿಸುತ್ತಾನೆ. ಹೂವಿನ ದಂಡೆಯನ್ನು ಕಂಡು ಬೆರಗಾದ ಕನ್ನಿಕಾಮವ್ವ ಯಾರು ಕಟ್ಟಿದ್ದೆಂದು ಕೇಳಿದಾಗ, ತನ್ನ ತಂಗಿಯ ಮಗಳು ಬಂದಿದ್ದಾಳೆಂದೂ, ಅವಳು ಕಟ್ಟಿದ ದಂಡೆಯೆಂದು ಸಂಗವ್ವ ಹೇಳುತ್ತಾಳೆ. ನಾಳೆಗೆ ಕರೆತರುವಂತೆ ಹೇಳಿದ ಕನ್ನಿಕಾಮವ್ವ ತನ್ನ ಸೀರೆ, ಕುಪ್ಪಸ, ಒಡವೆಗಳನ್ನು ಕೊಟ್ಟು ಕಳುಹಿಸುತ್ತಾಳೆ. ಸಂಗವ್ವಳೊಡನೆ ಹೆಣ್ಣಿನ ವೇಷದಲ್ಲಿ ಬಂದ ಬೀರಣ್ಣನ ಸೌಂದರ್ಯವನ್ನು ಕಂಡು ಮೆಚ್ಚಿದ ಕನ್ನಿಕಾಮವ್ವ ಮುದ್ದಿಸುತ್ತಾಳೆ. ಹಾಗೆ ಗಮನಿಸುವಾಗ ಬೀರಣ್ಣನ ಕಾಲಿನಲ್ಲಿಯ ಪದ್ಮ ಬೆಳ್ಳಿ ಭುಜ, ನಕ್ಕರೆ ಹವಳ, ಮಾತಿಗೆ ಮುತ್ತು ಉದುರುವುದನ್ನು ಕಂಡು, ಬಂದಿರುವುದು ಸೋದರಮಾವನೆಂದು ಗುರುತಿಸುತ್ತಾಳೆ.

ಬೀರಣ್ಣನು ಹಿಂದಿರುಗಿ ಬಂದು ಅಕ್ಕನನ್ನು ಕೇಳಿ ಎತ್ತು ಮತ್ತು ಬಳೆಗಳನ್ನು ಪಡೆಯುತ್ತಾನೆ. ವೇಷ ಬದಲಿಸಿಕೊಂಡು ನಗರೀಪಟ್ಟಣದ ನಡು ಊರಲ್ಲಿ ಬಳೆಯ ಅಂಗಡಿ ಒಡ್ಡುತ್ತಾನೆ. ಗೆಳತಿಯರಿಂದ ಸುದ್ದಿ ತಿಳಿದ ಕಾಮವ್ವ ತನಗೂ ಬಳೆಗಳು ಬೇಕೆಂದು ಹಟ ಮಾಡುತ್ತಾಳೆ. ಕಾಳಿನಾರಾಯಣನು ಅವಳ ಮತ್ತು ಬಳೆಗಾರನ ನಡುವೆ ಏಳು ಪರದೆ ಕಟ್ಟಿ ಬಳೆ ತೊಡಲು ಅನುಮತಿ ನೀಡುತ್ತಾನೆ. ತನ್ನ ಕಾಲು ಮಡಚಲಾಗದೆಂಬ ನೆಪದಿಂದ ಚಾಚಿ ಬೀರಣ್ಣ ಕುಳಿತಾಗ ಅದು ಅವಳ ತೊಡೆಯ ಮೇಲೆ ಹೋಗುತ್ತದೆ. ಪಾದದಲ್ಲಿಯ ಪದ್ಮ ಕಂಡ ಕಾಮವ್ವಳಿಗೆ ಬಂದವನು ತನ್ನ ಸೋದರಮಾವನೆಂದೆ ತಿಳಿಯುತ್ತದೆ.

ಕನ್ನಿಕಾಮವ್ವ ಮದುವೆಯಾಗಿಲ್ಲದ ಕಾರಣ ಅವಳಿಗೆ ಬಳೆ ತೊಡುವುದಿಲ್ಲವೆಂದು ಬೀರಣ್ಣ ಹೇಳುತ್ತಾನೆ. ತಾನು ಒಂದು ಬೀಜ ಕೊಡುತ್ತೇನೆ. ಅದನ್ನು ಊರಿದರೆ ಕೆಲವೇ ಗಂಟೆಗಳಲ್ಲಿ ಗಿಡವಾಗಿ ಬೆಳೆಯುತ್ತದೆ. ಅದರೊಡನೆ ನಾಳೆ ಅವಳಿಗೆ ಲಗ್ನ ಮಾಡಿ ಎಂದು ಬೀರಣ್ಣ ಹೇಳಿದ್ದಕ್ಕೆ ಅವಳ ತಂದೆ ಒಪ್ಪುತ್ತಾನೆ. ಬೀರಣ್ಣ ಅಲ್ಲಿಂದ ಅಂಗಡಿಗೆ ಬಂದು ವೇಷ ಬದಲಿಸಿಕೊಂಡು ಎತ್ತಿನ

ಮೇಲೆ ಬಳಿ ಹೇರಿಕೊಂಡು ಹಿಂದಕ್ಕೆ ಬಂದು, ತನಗೂ ಕನ್ನಿಕಾಮವ್ವಳಿಗೂ ಮದುವೆಯಾಯಿತೆಂದು ಅಕ್ಕನಿಗೆ ಹೇಳುತ್ತಾನೆ. ಅಕ್ಕನಿಂದ ಸೂತರ ತೇಜಿ ಕೇಳಿ ಪಡೆದು ಹೋಗಿ ಕನ್ನಿಕಾಮವ್ವಳನ್ನು ಕೂರಿಸಿಕೊಂಡು ಕರೆತರುತ್ತಾನೆ. ಮಾಯವ್ವ ಅವರಿಬ್ಬರಿಗೂ ಆರತಿ ಬೆಳಗಿ ಮನೆಗೆ ಬರಮಾಡಿ ಕೊಳ್ಳುತ್ತಾಳೆ.

## ೮. ಲಿಂಗ ಬೀರಣ್ಣ ದೇವರ ವೃತ್ತಾಂತ

ಅಕ್ಕ ಮಾಯವ್ವ ಮತ್ತು ತಮ್ಮ ಬೀರಣ್ಣ ನಾಡು ನೋಡಲೆಂದು ಹೊರಡಲು ಅನುವಾಗುತ್ತಾರೆ. ಹೀಗೆ ಹೊರಡುವಾಗ ತಮ್ಮನು ಕೂಸಿನ ರೂಪಿನಲ್ಲಿರಬೇಕೆಂಬುದು ಅಕ್ಕನ ಇಚ್ಛೆಯಾಗಿತ್ತು. ಬೀರಪ್ಪನು ತನ್ನ ಮಾಯಾಲೀಲೆಯಿಂದ ಮಗುವಾಗಲು ಅವನನ್ನು ಅಕ್ಕ ಬಗಲಲ್ಲಿ ಎತ್ತಿಕೊಂಡು ಹೊರಡುತ್ತಾಳೆ. ಅವರು ಮೊದಲಿಗೆ ಮುಂಗಿ ಪಟ್ಟಣ ತಲುಪುತ್ತಾರೆ. ಅಲ್ಲಿನ ರಾಜಕುಮಾರಿಗೆ ಬೆನ್ನಬ್ಯಾತಾಳಿಬ್ಯಾನಿ ಉಂಟಾಗಿದ್ದು ನಾಡ ವೈದ್ಯರೆಲ್ಲರೂ ಔಷಧಿ ಕೊಟ್ಟರೂ ಗುಣವಾಗಿರಲಿಲ್ಲ. ಅದಕ್ಕಾಗಿ ರಾಜನು ಮಗಳ ರೋಗ ಗುಣಪಡಿಸಿದವರಿಗೆ ಅವಳನ್ನೇ ಕೊಟ್ಟು ಮದುವೆ ಮಾಡುವುದಾಗಿ ಸಾರಿಸಿರುತ್ತಾನೆ. ಬೀರಪ್ಪನು ವಾಯಿಗಂಗಾಳ, ಪಂಚಡಂಗಿ, ರುಮ್ಮಿ ಚೂರಿ, ಹೊನ್ನಕಠಾರಿ, ಕಲಿಕೆಸಿರಪೇಚ ಇವುಗಳನ್ನು ಕೊಟ್ಟರೆ ರಾಜಕುಮಾರಿಯ ಬೇನೆ ಕಳೆಯುತ್ತೇನೆಂದು ಹೇಳಿ ಪಡೆದು, ರಾಜಕುಮಾರಿಯ ಮೇಲೆ ಹಸ್ತ ಎಳೆಯಲು ಆಕೆಯ ಬೇನೆ ಗುಣವಾಗುತ್ತದೆ.

ಅಲ್ಲಿಂದ ಮುಂದೆ ಸಾಗಿ ಕಲುಬುರ್ಗಿಯ ಕೆಳಗೆ ಭೀಮಾ ನದಿ ದಂಡೆಯ ಮೇಲಿರುವ ಕಲ್ಲತ್ತಿಗೆ ಬರುತ್ತಾರೆ. ಅಲ್ಲಿನ ಬೃಹದಾಕಾರದ ಹುತ್ತದ ಬಳಿ ನಾಗರ ನೋಡಲು ನಿಲ್ಲುತ್ತಾರೆ. ನಾಗರವು ಭೋರ್ಗರೆಯುತ್ತಾ ಬಂದಾಗ ಬೀರಪ್ಪ ಅದರ ಹೆಡೆಯನ್ನೇರಿ ನಿಲ್ಲುತ್ತಾನೆ. ಅಲ್ಲಿಂದ ಮುಂದೆ ಹೇಡಿಂಬ ಊರಿಗೆ ಬರುತ್ತಾರೆ. ಅಲ್ಲಿದ್ದ ಹೇಡಿಂಬ ರಾಕ್ಷಸನನ್ನು ಸಂಹಾರ ಮಾಡುತ್ತಾನೆ. ಹೇಡಿಂಬ ಎಂದು ಊರು ಸೇಡಂ ಎಂಬ ಹೆಸರು ಪಡೆಯುತ್ತದೆ.

ಮುಂದೆ ಕಾಯಿಕೊಂಕಣ ಎಂಬ ನಾಡಿಗೆ ಅವರು ಬರುತ್ತಾರೆ. ಅಲ್ಲಿ ಸಿರಿವಾಳ ಎಂಬ ಊರು. ಅಲ್ಲೊಂದು ಸುಂದರ ದೇವಾಲಯವಿತ್ತು. ಅಲ್ಲಿ ಬಾಗಿಯ ಬಗನಾಥನ ರಾಜಕಿ ಇತ್ತು. ಮಾಯವ್ವ ತಮ್ಮನನ್ನು ಮಗ್ಗುಲಲ್ಲಿರಿಸಿ ಮಲಗುತ್ತಾಳೆ. ಆದರೆ ಬೀರಪ್ಪ ಎದ್ದು ನಿಜರೂಪ ಪಡೆದು ಅಲ್ಲಿಯ ಬಾವಿಯಲ್ಲಿ ಈಜಿ ನೀರನ್ನು ಕದಡುತ್ತಾನೆ. ಗಿಡದ ಹೂವುಗಳೆನ್ನೆಲ್ಲಾ ಕಿತ್ತು

ಒಗೆಯುತ್ತಾನೆ. ಅಲ್ಲಿಗೆ ಬಗನಾಥನ ಪೂಜಾರಿ ಹಾರುವನೊಬ್ಬ ಬಂದು ಬಾವಿನೀರು ಕದಡಿರುವುದನ್ನು ಮತ್ತು ಹೂವುಗಳು ನೆಲಪಾಲಾಗಿರುವುದನ್ನು ಕಾಣುತ್ತಾನೆ. ಅಲ್ಲಿಯೇ ಬಸುರಿ ಮರದ ಕೆಳಗೆ ಮಲಗಿದ್ದ ಮಾಯವ್ವನ ಸೌಂದರ್ಯ ಕಂಡು ಬಗನಾಥನಿಗೆ ಹೇಳುತ್ತಾನೆ. ತನ್ನ ಪೈಲ್ವಾನ ಸೇವಕರನ್ನು ಕಳುಹಿಸಿ ಆಕೆಯನ್ನು ಹಗ್ಗದಿಂದ ಬಂಧಿಸಿ ತರಿಸುತ್ತಾನೆ. ಈ ಸಂದರ್ಭದಲ್ಲಿ ಬೀರಪ್ಪ ಮಾಯವ್ವನ ಕಂಕುಳಲ್ಲೆ ಇರುತ್ತಾನೆ. ಬಾಗಿಯ ಬಗನಾಥ ಗದ್ದುಗೆ ಇಳಿದು ಮಾಯವ್ವನ ಸೆರಗು ಹಿಡಿದೆಳೆದು ಮಂಚಕ್ಕೆ ಕರೆದಾಗ ಕೋಪಗೊಂಡ ಬೀರಪ್ಪ ಅಕ್ಕನ ಕಂಕುಳಿಂದ ಜಿಗಿದು ಸಿಡಿದು ನಿಲ್ಲುತ್ತಾನೆ. ಇದನ್ನು ಕಾವ್ಯದಲ್ಲಿ "ಪಾತಾಳದೊಳಗಿವನ ಪಾದೇನ ಕೈಲಾಸದೊಳಗಿವನ ಕಳಸೇನ" ೧ ಎಂದು ಬಣ್ಣಿಸಲಾಗಿದೆ. ಬೀರಪ್ಪನು ತನ್ನಲ್ಲಿರುವ ವಾಯುಗಂಗಾಳ, ಪಂಚಡಂಕಿಗಳಿಂದ ಬಗನಾಥನ ಶಿರವನ್ನು ಕತ್ತರಿಸುವನು. ಇದರಿಂದಾಗಿ ಕಾಯಿಕೊಂಕಣ ನಾಡಿಗೆ ಸಿರಿವಾಳ ಎಂಬ ಹೆಸರು ಬರುವುದು. ಬೀರಪ್ಪ ಶಿವಲಿಂಗಪ್ಪನ ಅವತಾರವನ್ನೂ, ಮಾಯವ್ವ ಸುಜ್ಞಾನಿ ಅವತಾರವನ್ನೂ ತಾಳಿ ಅಲ್ಲೇ ಸಿರಿಯಾಳದಲ್ಲಿ ನೆಲೆಸುವರು.

ಅಕ್ಕ ತಮ್ಮ ಇಬ್ಬರೂ ನಾಡ ಸಾದುಣಿಗಾಗಿ ಮುಂದೆ ಹೊರಟು ಕ್ವಾಣೆಗನೂರಿಗೆ ಬಂದರು. ಅಲ್ಲಿ ಕ್ವಾಣೇಸೂರನೆಂಬ ದೈತ್ಯನನ್ನು ಬೀರಪ್ಪ ಸಂಹಾರ ಮಾಡಿದನು. ಅಲ್ಲಿಂದ ಚಿಂಚಲಸೂರ ವನದೇವತೆ ಬಳಿ ಬಂದು ಜಾಗ ಕೇಳಿದಾಗ ಆಕೆ ಕೊಡಲಿಲ್ಲ. ಬೀರಪ್ಪನು ಆಕೆಯನ್ನು ಯುದ್ಧಕ್ಕೆ ಆಹ್ವಾನಿಸಿ ಹೊಡೆದು ಕೊಂದನು. ಆಕೆ ಪ್ರಾಣಬಿಡುವಾಗ ತನ್ನ ಹಕ್ಕುಗಳೆಲ್ಲವೂ ನಿಮ್ಮದೆಂದು ಹೇಳಿ ಸಾಯುತ್ತಾಳೆ. ಮಾಯವ್ವ ಖಾಯಂ ಆಗಿ ಅಲ್ಲಿ ನೆಲೆಸುತ್ತಾಳೆ.

ಬೀರಪ್ಪನು ಅಕ್ಕ ಮಾಯವ್ವಳನ್ನು ಚಿಂಚಿಲಸೂರಿನಲ್ಲಿ ಬಿಟ್ಟು ಬೆಳ್ಳಿಗಿರಿಗೆ ಹಿಂತಿರುಗಿ ಬರುತ್ತಾನೆ. ಅಕ್ಕ ತನ್ನಲ್ಲಿರುವ ಎಲ್ಲಾ ಕುರಿಗಳನ್ನು ಬೀರಪ್ಪನಿಗೆ ಒಪ್ಪಿಸುತ್ತಾಳೆ. ಈ ಕುರಿಗಳನ್ನು ಕಾಯಲು ಬೀರಪ್ಪನು ಬೊಪ್ಪಣ್ಣನನ್ನು ನೇಮಿಸಿದನು. ಬೊಪ್ಪಣ್ಣನು ಕುರಿಕಾಯಲು ತೊಡಗಿ ಹನ್ನೆರಡು ವರ್ಷ ಕಳೆದರೂ ಕುರಿಗಳು ಹೆಚ್ಚಲಿಲ್ಲ, ಮರಿಗಳನ್ನು ಹಾಕಲಿಲ್ಲ. ಅಕ್ಕನನ್ನು ಕರೆತಂದು ಹಬ್ಬ ಮಾಡಿದರೆ ಎಲ್ಲಾ ಸರಿಹೋಗಬಹುದೆಂದು ಬೀರಪ್ಪ ಆಲೋಚಿಸಿದನು. ಅಕ್ಕನನ್ನು ಕರೆತರಲು ಚಿಂಚಲಸೂರಿಗೆ ಬೊಪ್ಪಣ್ಣನನ್ನು ಕಳುಹಿಸಿಕೊಟ್ಟನು. ಕನ್ನಿಕಾಮವ್ವ ಜೋಳದ ರೊಟ್ಟಿ ಮಾಡಿ, ಹುಣಸೀ ಕಾಯಿ ಖಾರ ಹಚ್ಚಿ ಬುತ್ತಿ ಕಟ್ಟಿ ಕಳುಹಿಸಿರುವುದನ್ನು ನೋಡಿದ ಮಾಯವ್ವ ತನ್ನ

---

ತಮ್ಮನ ಮನೆಯಲ್ಲಿ ಅಕ್ಕಿ ಇರಲಿಲ್ಲವೆ ಎಂದು ಮರುಗಿ ಕಣ್ಣೀರಿಟ್ಟಳು. ತಮ್ಮನ ಒಳ್ಳೆಯದಕ್ಕಾಗಿ ನನ್ನ ಮನೆಯಲ್ಲಿಯೇ ಹಬ್ಬ ಮಾಡುತ್ತೇನೆಂದು ಹೇಳಿ, ಅರವತ್ತೆರೆಡು ಅಡುಗಿ ಸೈದನ ತಯಾರು ಮಾಡಿ ಬುತ್ತಿ ಕಟ್ಟಿ ಬೊಪ್ಪಣ್ಣನನ್ನು ಕಳುಹಿಸಿಕೊಟ್ಟಳು.

ಬೊಪ್ಪಣ್ಣನಿಂದ ಅಕ್ಕನ ಮಾತುಗಳನ್ನು ಕೇಳಿ ಬೀರಪ್ಪ ಕೋಪಗೊಂಡನು. ತಾನು ತೇಜಿಯನ್ನೇರಿ ಅಕ್ಕನಿಗಾಗಿ ನಂದಿಯನ್ನು ಮುಂದೆ ಮಾಡಿಕೊಂಡು ಚಿಂಚಲಸೂರಿಗೆ ಹೊರಟನು. ಅಲ್ಲಿ "ಕೂಡಲಾಕೆ ಬಂದಿಲ್ಲ ಕಾಡಲಿಕ ಬಂದೀನಿ" ೨ ಎಂದು ಗಡಿಸಿನಿಂದಲೇ ಹೇಳಿದ. ತಮ್ಮ ಬಂದನೆಂದು ಸಡಗರದಿಂದ ಮಾಯವ್ವ ಕುಳಿತುಕೊಳ್ಳಲು ಹೇಳಿದಾಗ, ನಾಗರಗದ್ದುಗೆಯ ಮೇಲೆ ಕುಳಿತುಕೊಳ್ಳುವುದಾಗಿ ಬಯಸಿದನು. ಕೂಡಲೆ ಮಾಯವ್ವ ಕಂಚಿನಾಲದ ಮರದ ನಾಗಪ್ಪನನ್ನು ನೆನದಳು. ಬಂದ ನಾಗಪ್ಪನು ಸುರುಳಿಗೊಂಡು ಹೆಡೆ ಎತ್ತಿ ಕುಳಿತನು. ಬೀರಪ್ಪನು ನಾಗಪ್ಪನ ಗದ್ದುಗೆಯ ಮೇಲೆ ಆಸೀನನಾದನು. ಸ್ನಾನ ಮಾಡೆಂದಾಗ ತಾನು ಎಂಜಲ ನೀರಿನ ಮಜ್ಜನ ಒಲ್ಲೆನೆಂದೂ, ತನಗೆ ಹರಿವ ಗಂಗಿ ನೀರು ಬೇಕೆಂದನು. ಮಾಯವ್ವನ ಪ್ರಾರ್ಥನೆ ಮೇರೆಗೆ ಗಂಗೆ ಹರಿದಾಡಿ ಬಂದು ಬಿಂದಿಗೆ ಸೇರಿದಳು. ಬೀರಪ್ಪನು ಸ್ನಾನ ಮಾಡಿದನು. ಊಟಕ್ಕೆ ಕುಳಿತ ತಮ್ಮ ಮೀಸಲು ಹಾಲು ಬೇಕೆಂದನು. ಮಾಯವ್ವ ಕಾಮಧೇನುವನ್ನು ಧ್ಯಾನಿಸಲು ಅದು ಬಂದು ಕೊಟ್ಟ ಹಾಲನ್ನು ತಮ್ಮನಿಗೆ ನೀಡಿದಳು. ಇಷ್ಟೆಲ್ಲಾ ಆದಮೇಲೆ ತಾನು ಕಾಡಲು ಬಂದಿಲ್ಲ ಕರೆಯಲು ಬಂದಿರುವುದಾಗಿ ಹೇಳಿದನು.

ಬೀರಪ್ಪ ಬೆಳ್ಳಿಗಿರಿಗೆ ಬಂದ ಅಕ್ಕನಿಗೆ ಉಡಲು ಸೀರೆ ತಂದನು. ಅದು ಅವಳಿಗೆ ಹಿಡಿಸದೆ ತಾಯಿ ಇಲ್ಲದ ತವರಿಗೆ ಬರಬಾರದೆಂದು ದುಃಖಿಸುತ್ತಾಳೆ. ತಮ್ಮನ ಸತ್ಕಾರ ಅಕ್ಕನಿಗೆ ತೃಪ್ತಿತರಲಿಲ್ಲ. ಅಂತೂ ಹಬ್ಬದ ಆಚರಣೆಯಾಗಿ, ಅಕ್ಕನನ್ನು ಬೊಪ್ಪಣ್ಣನ ಜೊತೆ ಮಾಡಿ ಚಿಂಚಲಸೂರಿಗೆ ಕಳುಹಿಸಿಕೊಟ್ಟನು.

## ೯. ಮಾಳಿಂಗರಾಯನ ಪೂರ್ವಜರ ವೃತ್ತಾಂತ

ಶ್ಯಾಡಬಾಬಾನ ಗುಡ್ಡದಲ್ಲಿದ್ದ ಗುರುಗೋರಕನಾಥರಲ್ಲಿ ಏಳುನೂರು ಬಾಲಜನ್ನಿಗಳಿದ್ದವು. ಮೂರು ವರ್ಷಗಳವರೆಗೆ ಮಳೆ ಬೆಳೆ ಆಗದಿದ್ದುದರಿಂದ ಬಾಲಜನ್ನಿಗಳಿಗೆ ತಿನ್ನಲು, ಕುಡಿಯಲು ತೊಂದರೆಯಾಯಿತು. ಗೋರಕನಾಥರು ಸಹಾಯಕ್ಕಾಗಿ ನಾಲ್ಕುದಿಕ್ಕಿಗೂ ಪತ್ರ ಕಳುಹಿಸಿದರು.

ಯಾರೂ ಸಹಾಯಕ್ಕೆ ಬರದಿದ್ದಾಗ ದಕ್ಷಿಣದಿಕ್ಕಿನ ಸ್ವಾಮರಾಯ ಪತ್ರ ಓದಿ ಗುರುವಿಗೆ ಯಾಳ್ಯಾಗಳು ಬಂದಾವೆಂದು ಧಾವಿಸಿ ಬಂದನು. ಈತನಿಗೆ ಗುರು "ಏಳನೂರು ಕಿಲ್ಲಾರಿ ಜೋಪಾನ ಮಾಡಬೇಕೆಂದಾನೆ/ ಮೇವಿದ್ದ ನಾಡಿಗೆ ಹೋಗರೆ ನೀರಿದ್ದ ನಾಡಿಗೆ ಹೋಗರೆ"೧ ಎಂದು ಹೇಳಿ ತನ್ನ ಎಲ್ಲಾ ಹಸುಗಳ ಜೊತೆಗೆ ಅಸ್ತ್ರ ಶಸ್ತ್ರಗಳನ್ನೆಲ್ಲ ಕೊಟ್ಟನು. ಗುರುವನ್ನು ಜೊತೆಗೆ ಕರೆದುಕೊಂಡ ಸ್ವಾಮರಾಯ ಬಾಬಾನ ಗುತ್ತಿಗೆ ಬಂದು ದೊಡ್ಡಿ ಹಾಕಿ ಆಕಳುಗಳನ್ನು ಸಲಹುತ್ತಿದ್ದರು.

ತೀವ್ರವಾದ ಬೇಸಿಗೆ ಬಿಸಿಲಿದ್ದುದರಿಂದ ಅಕ್ಕಕಾನಾಬಾಯಿ, ತಂಗಿ ಅಮೃತಾಬಾಯಿ ಇಬ್ಬರೇ ಇದ್ದಾಗ ವೃದ್ಧರ ವೇಷದಲ್ಲಿ ಶಿವ ಪಾರ್ವತಿಯರು ಬರುತ್ತಾರೆ. ಇಬ್ಬರೂ ಆತಿಥ್ಯ ಪಡೆದು, ಅವರಿಗೆ ಮಕ್ಕಳಿಲ್ಲದ್ದನ್ನು ಅರಿತು ಶಿವ ತನ್ನ ಕೊರಳಲ್ಲಿದ್ದ ಮಾಣಿಕ್ಯದ ಹರಳನ್ನೂ, ಪಾರ್ವತಿ ಜಂಬುನೀಲದ ಹರಳನ್ನೂ ತೆಗೆದು ಕೊಡುತ್ತಾರೆ. ಅವುಗಳನ್ನು ದೇವರ ಜಗಲಿಯ ಮೇಲೆ ಇಡಲು ಹೇಳಿ ಹೋಗುತ್ತಾರೆ. ಮನೆಗೆ ಬಂದ ಸ್ವಾಮಿರಾಯ ಮತ್ತು ತುಕಪ್ಪರಾಯರು ಯಾರಾದರೂ ಮನೆಗೆ ಬಂದಿದ್ದರೆ ಎಂದು ಕೇಳಲು, ಇಬ್ಬರು ವೃದ್ಧ ದಂಪತಿಗಳು ಬಂದು ಮಕ್ಕಳ ಫಲ ಕೊಟ್ಟು ಹೋದುದನ್ನು ತಿಳಿಸುತ್ತಾರೆ. ದೇವರ ಜಗಲಿಯ ಮೇಲಿದ್ದ ಆ ಹರಳುಗಳನ್ನು ನೋಡಿದಾಗ ಅವು ಮಾನವ ಪಿಂಡಗಳಾಗಿದ್ದವು. ಅವುಗಳನ್ನು ಜಕ್ಕಪ್ಪ-ಮಾಳಪ್ಪ ಎಂದು ಕರೆಯುತ್ತಾರೆ. ಏಳು ವರ್ಷ ಕಳೆದ ಮೇಲೆ ಮತ್ತೆ ಮೇವಿನ, ನೀರಿನ ಬರಗಾಲ ಕಾಣಿಸಿಕೊಂಡಿದ್ದರಿಂದ ಅಲ್ಲಿಂದ ಹೊರಟು ಬಾರಾಮತಿ ಅಡವಿಗೆ ಬರುತ್ತಾರೆ. ಅಲ್ಲಿ ಬಾರಾಮತಿ ಮತ್ತು ತೇರಾಮತಿ ಊರುಗಳನ್ನು ಸೃಷ್ಟಿಸಿ ಅಲ್ಲಿ ಉಳಿಯುತ್ತಾರೆ.

ಭವೂಳಿ ನಾಡಿನ ಗೌಳೇರು ಏಳುನೂರು ಎಮ್ಮೆಗಳನ್ನು ಸಾಕಿದ್ದರು. ತಮ್ಮ ನಾಡಿನಲ್ಲಿ ಮೇವಿಗೆ, ನೀರಿಗೆ ಬರಗಾಲ ಬಂದಿದ್ದರಿಂದ ಹುಡುಕಾಡುತ್ತಾ ಬಂದವರಿಗೆ ಬಾರಾಮತಿ ಅಡವಿಯಲ್ಲಿ ಮೇವು ಮತ್ತು ನೀರು ಇರುವುದನ್ನು ಕಂಡರು. ತಮ್ಮ ಗುಂಪಿನೊಂದಿಗೆ ಏಳುನೂರು ಎಮ್ಮೆಗಳನ್ನು ಹೊಡೆದುಕೊಂಡು ಬಂದು ಬಾರಾಮತಿಯ ಅಡವಿಯಲ್ಲಿ ನೆಲೆನಿಂತರು. ಹೀಗೆ ವಲಸೆ ಬಂದಾಗ ತಮ್ಮ ಮನೆ ದೇವತೆಯಾದ ಇಚ್ಚೇರಿಯ ಮಲಕವ್ವನನ್ನು ಪುಟ್ಟಿಯಲ್ಲಿಟ್ಟುಕೊಂಡು ಬಂದು ಬಾರಾಮತಿಯ ಅಡವಿಯಲ್ಲಿ ದೊಡ್ಡಿಯನ್ನು ನಿರ್ಮಿಸಿಕೊಂಡು ಎಮ್ಮೆ ಕಾಯುತ್ತಾ ಉಳಿದರು.

ಗೌಳಿಗರ ಹಾಲು ಮೊಸರಿನ ವ್ಯಾಪಾರ ಭರದಿಂದ ನಡೆದು ಬಾರಾಮತಿಯ ಬಜಾರ,

---

ತೇರಾಮತಿಯ ಸಂತೆಗಳನ್ನು ಮಾಡಿ ಶ್ರೀಮಂತರಾದರು. ಕಾಲಕಳೆದಂತೆ ತಮ್ಮ ಮನೆ ದೇವರು ಇಜೇರಿ ಮಲಕವ್ವನನ್ನು ಮರೆತರು. ಕ್ರೋಧಗೊಂಡ ಮಲಕವ್ವ ಎಮ್ಮೆಗಳ ಮೇಲೆ ಮತ್ತು ಕರುಗಳ ಮೇಲೆ ಸೆರಗು ಬೀಸಿದಳು. ಗೌಳಿಗರು ಹಾಲು ಹಿಂಡಲು ಹೋದಾಗ ಎಮ್ಮೆಗಳು ರಕ್ತ ಕರೆಯಲಾರಂಭಿಸಿದವು. ಎಳೆಗುರುಗಳಿಗೆ ಉಟುಗಿ ಬ್ಯಾನಿ ಹತ್ತಿತು. ಕರುಗಳು ಮೊಲೆ ಕುಡಿಯಲಿಲ್ಲ. ಕೊರವಂಜಿ ವೇಷದಲ್ಲಿ ಬಂದ ಪಾರ್ವತಿಗೆ ಗೌಳಿಗರು ತಮ್ಮ ಸ್ಥಿತಿ ಹೇಳಿಕೊಂಡರು. ನಿಮ್ಮ ಮನೆದೇವರಾದ ಇಜೇರಿ ಮಲಕವ್ವನನ್ನು ಮರೆತಿದ್ದೀರಿ. ಅವಳೀಗ ನರಬಲಿಯನ್ನೇ ಬೇಡಿದ್ದಾಳೆ. ಅದನ್ನು ನೀವು ಪೂರೈಸಬೇಕೆಂದು ತಿಳಿಸಿ ಭಂಡಾರ ಕೊಟ್ಟಳು. ಅದನ್ನು ತಂದು ಎಮ್ಮೆಗಳ ಮೇಲೆ, ಕರುಗಳ ಮೇಲೆ ಹಾಕಿದಾಗ ಎಮ್ಮೆಗಳು ಹಾಲು ಹಿಂಡತೊಡಗಿದವು. ಕರುಗಳಿಗೆ ಬಂದ ಬೇನೆ ದೂರವಾಯಿತು.

ತಮಗೆ ಉಂಟಾಗಿದ್ದ ಕಾಟ ದೂರವಾದುದರಿಂದ ಇಜೇರಿ ಮಲಕವ್ವನಿಗೆ ನರಬಲಿ ಕೊಡಲು ಗೌಳಿಗರು ಯೋಚಿಸಿದರು. ಶ್ರೀಮಂತನಾದ ಗಾಣಿಗೇರ ಮಲ್ಲಣ್ಣನನ್ನು ಬಲಿಕೊಡಲು ತೀರ್ಮಾನಿಸಿ, ಅವನಿಗೆ ಎಡೆಯ ಪದಾರ್ಥ ನೀಡಿ ಅಡಿಗೆ ಮಾಡಲು ಒಪ್ಪಿಸಿದರು. ಅವನು ಅಡಿಗೆ ತಯಾರಿಸಿಕೊಂಡು ಬಂದಾಗ ನೈವೇದ್ಯ ಹಿಡಿಯಲು ಸೂಚಿಸಿದರು. ನೈವೇದ್ಯ ಹಿಡಿದ ಮಲ್ಲಣ್ಣ ಮಲಕವ್ವನಿಗೆ ನಮಸ್ಕರಿಸಲು ಅಡ್ಡಬಿದ್ದಾಗ, ಆ ಸಮಯವನ್ನೇ ಕಾಯ್ದಿದ್ದ ಗೌಳಿಗರು ಅವನ ಕುತ್ತಿಗೆಯನ್ನು ಹಾರಿಸಿದರು. ಇದರಿಂದ ಇಜೇರಿ ಮಲಕವ್ವ ಸಂತೋಷಗೊಂಡಳು.

ನರಬಲಿ ಕೊಟ್ಟು ಹಬ್ಬ ಮಾಡಿದ ಗೌಳಿಗರು ರಾತ್ರಿ ಮಲಗಿದ ಮೇಲೆ ನಡುರಾತ್ರಿಯಲ್ಲಿ ಅವರ ಏಳುನೂರು ಎಮ್ಮೆಗಳು ದೊಡ್ಡಿಯಿಂದ ಹೊರಬಂದು ಬಿಲ್ಲಾಳ ಶ್ಯಾಮರಾಯ ಕಾಯುತ್ತಿದ್ದ ಹನ್ನೆರಡು ಕೂರಿಗೆ ಮೇವಿನ ಹೊಲವನ್ನು ಹೊಕ್ಕವು. ಅಟ್ಟಗದ ಮೇಲೆ ಕುಳಿತು ಕಾಯುತ್ತಿದ್ದ ಶ್ಯಾಮರಾಯ ಅದನ್ನು ಕಂಡು ಅವುಗಳನ್ನು ಹೊಡೆದೋಡಿಸಿದ. ಎಮ್ಮೆಗಳನ್ನು ಹಿಂಬಾಲಿಸಿ ಬಂದ ಶ್ಯಾಮರಾಯ ದೊಡ್ಡಿಯ ಸಮೀಪಕ್ಕೆ ಬಂದಾಗ ಅಲ್ಲಿನ ವಾಸನೆಯಿಂದ ಗೌಳಿಗರು ಹಬ್ಬ ಮಾಡಿರುವುದನ್ನು ಗ್ರಹಿಸಿದನು. ಊರಗೌಡರಾದ ತಮಗೆ ಕೇಳದೆ ಹೇಗೆ ಹಬ್ಬ ಮಾಡಿದರೆಂದು ಅವರನ್ನು ಬೆದರಿಸಿದ. ಅವರು ಕ್ಷಮೆಯಾಚಿಸಲು ಶ್ಯಾಮರಾಯ ಮಲಕವ್ವನ ಮುಂದೆ ಹಾಕಿದ್ದ ರಂಗದ ಒಂದು ಮೂಲೆ ಚಾಜ ಪಡೆದು ಶ್ಯಾಮರಾಯ ಹಿಂತಿರುಗಿದ.

---

ಶ್ಯಾಮರಾಯ ರಂಗದ ಮೂಲಿ ಪಡೆದು ಮನೆಗೆ ಬಂದು ಇಳುಹಲು ಅದರೊಂದಿಗೆ ಬಂದ ಇಚೇರಿ ಮಲಕವ್ವ ಒಂದೇ ಸಮನೆ ಮನೆಯಲ್ಲಿ ಕುಣಿಯುವಳು. ಶ್ಯಾಮರಾಯನ ಏಳುನೂರು ಕಿಲಾರಿ ಆಕಳಿಗಳು ರಕ್ತ ಹಿಂಡತೊಡಗಿದವು. ಬಾಲಜನ್ನಿಗೆಗಳಿಗೆ ಊಟಗೆ ಬೇನೆ ಬರುವುದು. ಮಲಕವ್ವ ಪಾರ್ವತಿಯನ್ನು ಬರಮಾಡಿಕೊಂಡು, ಕೊರವಂಜಿ ನಾಗವ್ವನ ವೇಷಧರಿಸಿ ಗೌಳಿಗರಿಗೆ ಹೇಳಿದಂತೆ ಶ್ಯಾಮರಾಯನಿಗೂ ಹೇಳಲು ಒತ್ತಾಯಿಸುತ್ತಾಳೆ.

ಅದಕ್ಕೆ ಒಪ್ಪಿದ ಪಾರ್ವತಿ ಕೊರವಂಜಿಯಾಗಿ ಬಂದು ಇಚೇರಿ ಮಲಕವ್ವ ನಿನ್ನ ಮನೆಗೆ ಬಂದಿರುವಳೆಂದೂ, ಅವಳು ಒಂದು ಎಳೆಮಗುವನ್ನು ಆಹಾರವಾಗಿ ಬೇಡುತ್ತಾಳೆಂದು ಶ್ಯಾಮರಾಯನಿಗೆ ಹೇಳುವಳು.

ತಾಮಟಗೇರ ಹೆಣ್ಣು ಮಗಳು ತನ್ನ ಮಗುವನ್ನು ಮನೆಯ ಮುಂದೆ ಕೂರಿಸಿ ನೀರಿಗೆ ಹೋದುದನ್ನು ಕಂಡು ಶ್ಯಾಮರಾಯ ಆ ಮಗುವನ್ನು ಅಪಹರಿಸಿ ಬಂದು ಇಚೇರಿ ಮಲಕವ್ವನಿಗೆ ಬಲಿಕೊಡುವನು. ನೀರಿಗೆ ಹೋದ ಹೆಣ್ಣುಮಗಳು ಹಿಂತಿರುಗಿ ಬಂದು ತನ್ನ ಮಗು ಕಾಣದೆ ಗೋಳಾಡತೊಡಗಿದಾಗ ನೆರೆದ ಜನರಲ್ಲಿ ಮುದುಕಿಯೊಬ್ಬಳು ಶ್ಯಾಮರಾಯ ಕೂಸನ್ನು ಒಯ್ದುದಾಗಿ ತಿಳಿಸುವಳು. ಜನರೆಲ್ಲಾ ಕೂಡಿ ಶ್ಯಾಮರಾಯನ ಮನೆಗೆ ಬಂದಾಗ ಆತ ಅಡಗಿಕೊಳ್ಳುತ್ತಾನೆ. ಬಂದವರು ಒಳಗೆ ಹೋಗಿ ನೋಡಲಾಗಿ ಇಚೇರಿ ಮಲಕವ್ವನ ಎದುರು ಕೂಸಿನ ತಲೆಯ ಬದಲು ಟಗರಿನ ತಲೆ ಕಾಣುತ್ತದೆ. ಮುಂದೇನು ಮಾಡುವುದೆಂದು ಶ್ಯಾಮರಾಯನು ತುಕ್ಕಪ್ಪರಾಯನ ಜೊತೆ ಚರ್ಚಿಸಿ ಏಳುನೂರು ಕಿಲಾರಿ ಆಕಳುಗಳನ್ನು ಹೊಡೆದುಕೊಂಡು ಇಬ್ಬರೂ ಉಂಬಳಿ ಠಾಣೆದ ಅಡವಿಗೆ ಬರುವರು.

ಉಂಬಳಿ ಠಾಣೆಯ ವ್ಯಾಪ್ತಿಯಲ್ಲಿ ದೊಡ್ಡಿ ನಿರ್ಮಿಸಿ ಆಕಳುಗಳನ್ನು ಮತ್ತು ಎಳೆಗರುಗಳನ್ನು ಸಲಹುತ್ತಿರುವಾಗ ಕಳ್ಳಕಂಟಗಿ ಗ್ರಾಮದ ಏಳುನೂರು ಬೇಡರು ಅಲ್ಲಿಗೆ ಬರುವರು. ಆದರೆ ಶ್ಯಾಮರಾಯ ಮತ್ತು ತುಕ್ಕಪ್ಪರಾಯರ ಬಳಿ ಬಿಲ್ಲು ಬಾಣಗಳಿರುವುದನ್ನು ನೋಡಿ ಹೆದರಿ ಓಡಿಹೋದರು. ಅನಂತರ ಅವರು ಒಬ್ಬೊಬ್ಬರಿದ್ದಾಗ ಆಕ್ರಮಣ ಮಾಡಬೇಕೆಂದು ನಿಶ್ಚಯಿಸಿ. ಕಂಚಿನಾಲದ ಮರದ ಮೇಲೆ ಒಬ್ಬನನ್ನು ಕೂರಿಸಿ ಸಮಯ ಕಾಯತೊಡಗಿದರು.

ಒಂದು ದಿನ ಶ್ಯಾಮರಾಯ ಸ್ನಾನ ಮಾಡಲು ಮನೆಯಲ್ಲೇ ಉಳಿಯುತ್ತಾನೆ. ಅಣ್ಣ

ತುಕ್ಕಪ್ಪರಾಯ ಒಬ್ಬನೆ ಆಕಳುಗಳನ್ನು ಹೊಡೆದುಕೊಂಡು ಅಡವಿಗೆ ಹೋಗುತ್ತಾನೆ. ಅಲ್ಲಿ ಚಾಣಕರಾಯನ ಕೋಟೆಯ ಸುತ್ತ ದನಗಳನ್ನು ಮೇಯಿಸುತ್ತಾ ತಾನು ಊಟಮಾಡುವಾಗ ಮೀನು, ಮೊಸಳೆಗಳಿಗೆ ಒಂದು ತುತ್ತು ಎಸೆಯಲು ಅವು ತಿಂದು ಸತ್ತವು. ಇದನ್ನು ಕಂಡ ತುಕ್ಕಪ್ಪರಾಯ ಭೂಮಿಯಲ್ಲಿ ಗುಂಡಿ ತೋಡಿ ತಾನು ತಂದ ಬುತ್ತಿಯನ್ನು ಹೂಳಿದನು. ಕಂಚಿನ ಆಲದ ಮರದ ಮೇಲೆ ಕುಳಿತ ಬೇಡನು ತುಕ್ಕಪ್ಪರಾಯ ಒಂಟಿಯಾಗಿರುವುದನ್ನು ಕಂಡು ಉಳಿದ ಬೇಡರಿಗೆ ಸೂಚನೆ ಕೊಟ್ಟನು. ಬಂಡೆ ಬಂಡೆಗಳೆಡೆಯಲ್ಲಿ ಅಡಗಿ ಕುಳಿತಿದ್ದ ಬೇಡರು ಓಡಿ ಬಂದಾಗ, ಬೇಡರ ಕೈಯಲ್ಲಿ ಸಾಯುವುದಕ್ಕಿಂತ ತಾನೇ ಸಾಯುವುದು ಮೇಲೆಂದು ತನ್ನ ಎದೆಗೆ ತಾನೇ ಬಾಣ ಹೊಡೆದುಕೊಂಡನು. ಇದನ್ನು ಕಂಡು ಬೇಡರು ಏಳುನೂರು ಆಕಳುಗಳನ್ನು ಹೊಡೆದುಕೊಂಡು ಹೊರಟರು.

ಒಂದೆರಡು ಗೂಳಿಗಳು ಕಾಲು ಕೆದರಿ ಬೇಡರ ವಿರುದ್ಧ ತಿರುಗಿ ನಿಂತಾಗ ಎಲ್ಲ ಆಕಳುಗಳನ್ನು ಬಿಟ್ಟು ಬೇಡರು ಓಡಿಹೋದರು. ಹಿಂದಕ್ಕೆ ಬಂದ ಎಲ್ಲ ಆಕಳುಗಳು ಗೂಳಿಗಳು ಕೂಡಿ ಕಂಚಿನ ಆಲದ ಮರದ ಹತ್ತಿರ ಬಂದು ತುಕ್ಕಪ್ಪರಾಯನಿಗೆ ಬಾಲ ಬೀಸಿ ಗಾಳಿ ಹಾಕತೊಡಗಿದವು. ಈ ಸುದ್ದಿಯನ್ನು ಶ್ಯಾಮರಾಯನಿಗೆ ಮುಟ್ಟಿಸಲು ತುಕ್ಕಪ್ಪರಾಯ ಸೂಚಿಸಲು, ಒಂದೆರಡು ಆಕಳು, ಗೂಳಿಗಳು ಶ್ಯಾಮರಾಯನಲ್ಲಿಗೆ ಹೊರಟವು. ಬಿಲ್ಲಾಳು ಶ್ಯಾಮರಾಯ ನಿದ್ರೆಯಿಂದ ಎಚ್ಚತ್ತು ತಲೆ ಕೂದಲು ಹಿಂಡಿದಾಗ ರಕ್ತದ ಹನಿಗಳು ಬೀಳುವುವು. ಅಪಶಕುನ ಗ್ರಹಿಸಿದ ಆತ ಘಾತವಾಯಿತೆಂದು ತುಕ್ಕಪ್ಪರಾಯನಲ್ಲಿಗೆ ಓಡಿಬಂದನು. ತನ್ನ ಎದೆಗೆ ಬಾಣ ಹೊಡೆದುಕೊಂಡು ಕುಳಿತ ಅಣ್ಣನನ್ನು ಕಂಡು ದುಃಖಿತನಾದನು. ಮಕ್ಕಳಿಗೆ ಈ ಸುದ್ದಿ ತಿಳಿಸಲು ಆಲದ ಮರ ಏರಿ ದುಃಖದ ಕೊಳಲು ಊದಿದನು . ಅಣ್ಣನನ್ನು ಮನೆಗೆ ಹೊತ್ತು ತಂದು ಉಂಬಳಿತಾಣಾದ ಮೇಲೆ ಹೆಂಡಿಕಟ್ಟದ ಬಳಿ ಸಮಾಧಿ ತೋಡಿದನು. ತುಕ್ಕಪ್ಪರಾಯನು ಮಕ್ಕಳಾದ ಜಕ್ಕಪ್ಪ-ಮಾಳಪ್ಪರಿಗೆ ಬೇಡರ ಮೇಲೆ ಸೇಡು ತೀರಿಸಕೊಳ್ಳಲು ಹೇಳಿದನು. ಶ್ಯಾಮರಾಯನು ಅಣ್ಣನ ಎದೆಯಿಂದ ಬಾಣ ಕಿತ್ತವು ಅಣ್ಣನ ಸಮಾಧಿ ಮಾಡಿದನು.

ಅಣ್ಣನ ಸಾವಿನ ನಂತರ ಶ್ಯಾಮರಾಯ ಪರಿವಾರವನ್ನೆಲ್ಲಾ ಕೂಡಿಕೊಂಡು ಗುರುಗೋರಕನಾಥರಿರುವ ಶ್ಯಾಡಬಾನ ಗುಡ್ಡಕ್ಕೆ ಬಂದರು. ಒಂದು ದಿನ ಶ್ಯಾಮರಾಯ ಆಕಳನ್ನು

ಮೇಯಲು ಬಿಟ್ಟು ಬಂಡೆಯ ಮೇಲೆ ಧ್ಯಾನ ಮಾಡುತ್ತಾ ಕುಳಿತಿರುವಾಗ ಅಣ್ಣನ ನೆನಪಾಗಿ ಕಣ್ಣೀರು ಹಾಕಿದನು. ಅದು ಆ ಪ್ರದೇಶದಲ್ಲಿದ್ದ ಗುರುಗೋರಕನಾಥನ ತೊಡೆಯ ಮೇಲೆ ಬಿದ್ದಾಗ, ಇವು ತನ್ನ ಶಿಶು ಮಕ್ಕಳ ಕಣ್ಣೀರೆಂದು ಗುರುತು ಹಿಡಿದು ಶ್ಯಾಮರಾಯನನ್ನು ಹುಡುಕಿಕೊಂಡು ಬಂದರು. ಗುರುವಿನಿಂದ ಶ್ಯಾಮರಾಯ ಬಿಲ್ಲು, ಬಾಣ. ಚಾಡಿ-ಮೋಡಿ ಎಲ್ಲಾ ವಿದ್ಯೆಗಳಲ್ಲಿ ಪರಿಣತಿ ಪಡೆದುಕೊಂಡನು.

ಡಿಲ್ಲಿ ಸುಲ್ತಾನಪುರದಲ್ಲಿ ಒಬ್ಬ ಬಾಷಾ ಆಳುತ್ತಿದ್ದ. ಅವನಲ್ಲಿ ಸೊಕ್ಕಿದ್ದ ಆನೆ, ಮನುಷ್ಯರು ಇದ್ದರು. ಬಾಷಾನ ವಿದ್ಯೆ ಕಲಿತ ಶ್ಯಾಮರಾಯ ಗುರುಗೋರಖನಾಥನ ಅಪ್ಪಣೆ ಮೇರೆಗೆ ಡಿಲ್ಲಿ ಸುಲ್ತಾನ ಪುರಕ್ಕೆ ಹೋಗಿ ಸವಾಲೆಸೆದು ಪಗಡೆಯಲ್ಲಿ ಬಾಷಾನನ್ನು ಸೋಲಿಸಿ ಡಿಲ್ಲಿ ಗಾದೆ ಪಡೆದು ಶ್ಯಾಮರಾಯ ಅರಸನಾದನು.

ಡಿಲ್ಲಿ ಅರಸನಾದ ಮೇಲೆ ಶ್ಯಾಮರಾಯ ಮನೆ, ಮಕ್ಕಳು ಎಲ್ಲವನ್ನೂ ಮರೆತನು. ಗುರುಗೋರಖನಾಥರು ಮಕ್ಕಳನ್ನು ನೋಡಿಕೊಂಡಿದ್ದರು. ಗುರುವಿನ ಅಪ್ಪಣೆ ಪಡೆದು ಮಕ್ಕಳು ತಂದೆಯ ಶೋಧ ಮಾಡಲು ಕೆಂಪು ಕುದುರೆಯೇರಿ ಜಕ್ಕಪ್ಪರಾಯ, ಬಿಳಿ ಕುದುರೆ ಏರಿ ಮಾಳಿಂಗರಾಯ ಹೊರಟರು. ಮಕ್ಕಳ ಗುರುತು ಹಿಡಿದ ನಂತರ ತಾನು ಎಲ್ಲರನ್ನೂ ಮರೆತಿರುವುದನ್ನು ನೆನೆದು ಶ್ಯಾಮರಾಯ ಶ್ಯಾಡಬಾನಗುಡ್ಡಕ್ಕೆ ಬರುತ್ತಾನೆ. ಗುರುವನ್ನು ಭೇಟಿಯಾಗಿ ಮತ್ತೆ ಮಕ್ಕಳೊಡನೆ ಡಿಲ್ಲಿ ಸುಲ್ತಾನಪುರಕ್ಕೆ ಬಂದು ಹನ್ನೆರಡು ನೂರು ದಂಡು ಪಡೆದು. ಬಾಷಾನಿಗೆ ಡಿಲ್ಲಿ ರಾಜಕೀಯ ಬಿಟ್ಟುಕೊಟ್ಟು ಹಿಂತಿರುಗಿ ಬರುವಾಗ ಅಡಗಿಕೊಂಡಿದ್ದ ಏಳುನೂರು ಕಳ್ಳಕೌಂಟಗಿ ಬೇಡರನ್ನು ಸದೆ ಬಡಿದುಹೋಗಬೇಕೆಂದು ವಿಚಾರ ಮಾಡುತ್ತಾರೆ. ಹನ್ನೆರಡು ನೂರು ದಂಡು ಬೇಡರನ್ನು ಕೊಂದು ಹೆಣಗಳನ್ನು ಹೊತ್ತು ತಂದು ಉಂಬಳಿ ಠಾಣೆಯಲ್ಲಿ ತುಕ್ಕಪ್ಪರಾಯನ ಸಮಾಧಿ ಬಳಿ ಗುಂಡಿ ತೋಡಿ ಎಲ್ಲಾ ಬೇಡರ ಹೆಣಗಳನ್ನು ಹಾಕಿ ಮುಚ್ಚುತ್ತಾರೆ. ನಂತರ ಶ್ಯಾಡಬಾಬಾನ ಗುಡ್ಡಕ್ಕೆ ಬರುತ್ತಾರೆ. ಅಲ್ಲಿಂದ ಜತ್ತು ನಾರಾಯಣಪುರಕ್ಕೆ ಬಂದು ವಾಸಿಸತೊಡುತ್ತಾರೆ. ಏಣಕಿ ಊರಿನ ಬಾಕೂಬಾಯಿಯನ್ನು ಜಕ್ಕಪ್ಪರಾಯನಿಗೂ, ಕೆಂಪನೂರಿನ ಶರಣಮ್ಮ ಮತ್ತು ಗಂಗಿನಾಡಗೌಡನ ಮಗಳು ಈರಮ್ಮ ಈ ಇಬ್ಬರನ್ನೂ ಮಾಳಿಂಗರಾಯನಿಗೂ ತಂದು ಮದುವೆ ಮಾಡಲಾಗುತ್ತದೆ.

---

## ೧೦. ಮಾಳಿಂಗರಾಯನು ಬೀರಪ್ಪನ ಸೇವೆಯಲ್ಲಿ

ಹಬ್ಬಕ್ಕೆ ಬಂದಿದ್ದ ಅಕ್ಕ ಮಾಯವ್ವನನ್ನು ಕಳುಹಿಸಿ ಕೊಟ್ಟ ನಂತರ ಬೀರಪ್ಪನು ಬೆಳ್ಳಿಗಿರಿಯನ್ನು ಬಿಟ್ಟು ಗೌಡಗಿರಿಗೆ ಬಂದು ಕುರಿಕಾಯುತ್ತಾ ಇರುತ್ತಾನೆ. ಹುತ್ತಿನ ಗಡ್ಡಿಯ ಮುಂದೆ ಕುರಿಗಳನ್ನು ಬಿಟ್ಟು ತಾನು ತಪಸ್ಸಿಗೆ ಕುಳಿತನು. ಬೀರಪ್ಪನ ಮೇಲೆ ಹುತ್ತ ಬೆಳೆಯಿತು. ಶಿವನಿಗೆ ಇದು ತಿಳಿದು ಬಂದು ಹುತ್ತದ ಮೇಲೆ ಕೈಯಿಟ್ಟಾಗ, ಹುತ್ತವೆಲ್ಲಾ ಬಿಚ್ಚಿಕೊಂಡು ಬೀರಪ್ಪ ಕಾಣಿಸಿಕೊಂಡನು. ಜಟಾದಾರಿಯಾಗಿದ್ದ ಬೀರಪ್ಪನನ್ನು ಈ ಘೋರ ತಪಸ್ಸಿಗೆ ಕಾರಣವೇನೆಂದು ಕೇಳಿದಾಗ, ತನಗೆ ಸರಿಜೊಡಿಯಾದ ಶಿಷ್ಯನನ್ನು ಬೀರಪ್ಪ ಕೇಳುತ್ತಾನೆ. ಮೂಡಲ ದಿಕ್ಕಿನಲ್ಲಿ ೧೨೦೦ ದಂಡಿನೊಡನೆ ಇರುವ ಜಕ್ಕಪ್ಪ, ಮಾಳಪ್ಪರ ಬಗ್ಗೆ ಶಿವ ತಿಳಿಸುತ್ತಾನೆ. ಕೆಂಪ ಕುದುರಿ, ಕೆಂಪ ನಿಶಾನಿವುಳ್ಳವನು ಜಕ್ಕಪ್ಪನೆಂದೂ, ಬಿಳಿಕುದರಿ ಹಸಿರು ನಿಶಾನಿವುಳ್ಳವನು ಮಾಳಪ್ಪನೆಂದೂ ಪರಿಚಯನೀಡಿ, ಮಾಳಪ್ಪನು ನಿನಗೆ ತಕ್ಕ ಶಿಷ್ಯನಾಗುವನೆಂದು ಹೇಳಿದನು. ಜಲಮಾಯಿ ಕೆರೆಯ ಮೇಲೆ, ಡೋಣಜ ಕೆರೆಯ ಕೆಳಗೆ ಇರುವ ಯಕ್ಕಿಯಗಿಡದ ಬನಕ್ಕೆ ಜಕ್ಕಪ್ಪ ಮತ್ತು ಮಾಳಪ್ಪ ಬೇಟೆಗೆ ೧೨೦೦ ದಂಡಿನೊಡನೆ ಬರುತ್ತಾರೆ. ಅಲ್ಲಿಗೆ ನೀನು ಗಂಡು ಎರಳೆಯಾಗಿ ಸುಳಿದರೆ ನಿನ್ನನ್ನು ನೋಡಿ ಮಾಳಪ್ಪ ಬೆನ್ನು ಹತ್ತುತ್ತಾನೆ. ಅಲ್ಲಿ ಬೀರಪ್ಪನು ಮಾಡಬೇಕಾದ ಮಾಯದಾಟವನ್ನು ತಿಳಿಸಿ ಶಿವ ಮಾಯವಾಗುತ್ತಾನೆ.

ಎರಳೆಯಾಗಿ ಬಂದು ಬೀರಪ್ಪನನ್ನು ಮಾಳಪ್ಪ ಹಿಂಬಾಲಿಸಿದಾಗ ಎರಲೆ ಕೆರೆಯೊಳಗೆ ಹಾರುವುದು. ಮಾಳಪ್ಪನೂ ಕೆರೆಗ ಹಾರಿ ಹಿಂಬಾಲಿಸುತ್ತಾನೆ.ಹೀಗೆ ಪಾತಾಳಕ್ಕೆ ಹೋದಾಗಿ ಎರಳೆಯ ರೂಪದ ಬೀರಪ್ಪ ಮಾನವ ರೂಪಿನಿಂದ ತಿರುಗಿ ನಿಂತಾಗ, ಮಾಳಪ್ಪ ಗುರುವಿನ ಪಾದಕ್ಕೆ ಮಣಿಯುವನು. ಮೂರು ದಿನಗಳ ನಂತರ ಒಬ್ಬನೇ ಹಿಂದಿರುಗಿದ ಜಕ್ಕರಾಯನನ್ನು ತಾಯಿ ಮಾಳಪ್ಪ ಎಲ್ಲಿ ಎಂದು ಕೇಳಿದಾಗ ಅವನು ಗುರುವನ್ನು ಕೂಡಿಕೊಂಡಿದ್ದಾನೆಂದು ಹೇಳುತ್ತಾನೆ. ಅಷ್ಟರಲ್ಲಿ ತಾನು ಗುರುವಿನೊಡನೆ ಕೆರೆಯ ದಂಡೆಯ ಮೇಲೆ ಬರುವೆನೆಂದು ಅಕಾಶವಾಣಿಯಾಗಿ ಮಾಳಪ್ಪ ಹೇಳುತ್ತಾನೆ. ಎಲ್ಲರೂ ಕೆರೆಯ ದಂಡೆಯಲ್ಲಿ ಊಟದ ಸಿದ್ದತೆ ಮಾಡಿ ಕಾಯುತ್ತಿರುವಾಗ ಗುರುವಿನ ಕೈ ಹಿಡಿದು ಜಲಮಾಯಿ ಕೆರೆಯಿಂದ ಮಾಳಪ್ಪ ಬರುವನು. "ಶಿವನೇ ನಮ್ಮಯ ದೇವರು ಬಂದಾರ ಬನ್ನೀರೆ" ಎಂದು ಹಾಡಿ ಸಂತೋಷಪಟ್ಟರು.

ಗೌಡಗಿರಿಯ ಗುಡ್ಡದಲ್ಲಿರುವ ತಾನು ಕಾಯ್ದ ಕುರಿಗಳನ್ನು ಜೋಪಾನ ಮಾಡುವಂತೆ

ಮಾಳಿಂಗರಾಯನಿಗೆ ಬೀರಪ್ಪ ವಹಿಸುತ್ತಾನೆ. ಗುರುವಿಗೆ ಸಿಡಿಯಾಣದಲ್ಲಿ ಒಂದು ಗುಡಿ ಕಟ್ಟಿಸುವುದಾಗಿ ಮಾಳಿಂಗರಾಯ ಹೇಳುತ್ತಾನೆ. ಅದಕ್ಕಾಗಿ ಬಿಜ್ಜಳ ಗುಂತಿಗೆ ಬಂದು ಸಾಲದಾವಣಿ ಹಾಕಿ ಅಲ್ಲಿಂದ ಸಿಡಿಯಾಣಕ್ಕೆ ಬಂದು ಗುರುವಿಗಾಗಿ ಪಾಯ ಹೊಡೆದು ಗಚ್ಚಿನ ಗುಡಿಯನ್ನು ಕಟ್ಟಿಸುತ್ತಾನೆ. ಬೀರಪ್ಪ ಅಲ್ಲಿ ಗದ್ದುಗೆ ಏರುತ್ತಾನೆ.

ಬೀರಣ್ಣನು ಗದ್ದುಗೆ ಏರಿದ ನಂತರ ಆತನ ಊಟಕ್ಕೆ ಹುಲಿ ಗಿಣ್ಣನ್ನೂ, ಆಟಕ್ಕೆ ಹುಲಿ ಮರಿಯನ್ನು ಒಪ್ಪಿಸಲು ಮಾಳಪ್ಪ ಪ್ರಯಾಣ ಹೊರಟನು. ಮಾಳಮ್ಮನ ಗುಡ್ಡದಲ್ಲಿನ ಕೆಳಗುಡ್ಡದ ಗವಿಗೆ ಬಂದಾಗ ಇನ್ನೂ ಕಣ್ಣು ಬಿಡದ ಹುಲಿ ಮರಿಗಳನ್ನು ಕಂಡನು. ಅಷ್ಟರಲ್ಲಿ ಅಲ್ಲಿಗೆ ಬಂದ ಹಾವನ್ನು ನೋಡಿ ಅದರ ಮೇಲೆ ಮಾಳಪ್ಪ ಭಂಡಾರವನ್ನು ಒಗೆದನು, ಕೂಡಲೇ ಸರ್ಪ ಹಿಂದಕ್ಕೆ ಹೋಯಿತು, ಮತ್ತೆ ಭಂಡಾರ ತೆಗೆದು ಹುಲಿ ಮರಿಗಳ ಮೇಲೆ ಒಗೆದಾಗ ಅವುಗಳ ಕಣ್ಣು ಬಂದವು. ಆಹಾರ ಹುಡುಕಲು ಹೋಗಿದ್ದ ತಾಯಿ ಹುಲಿ ಬಂದಾಗ ಮರಿಗಳು ಮಾಳಪ್ಪನ ಉಪಕಾರವನ್ನು ತಿಳಿಸಿದವು. ಮಾಳಪ್ಪನಿಗೆ ಹುಲಿ ಹಾಲು ಬೇಕೆಂಬುದನ್ನು ತಿಳಿದ ತಾಯಿ ಹುಲಿ ತನ್ನ ಹಾಲಿನ ಜೊತೆಗೆ ಮರಿಗಳನ್ನು ಮಾಳಪ್ಪನಿಗೆ ಬಹುಮಾನವಾಗಿ ನೀಡಿತು. ಗುರುವಿಗೆ ಅವುಗಳನ್ನು ಸಲ್ಲಿಸಿದ ಮಾಳಪ್ಪ ಪೂಜೆ ಸಲ್ಲಿಸಿ ಆರತಿ ಬೆಳಗಲು, ಆ ಬೆಳಕು ಕೈಲಾಸದಲ್ಲಿ ಬಿದ್ದಾಗ ಇದಾವ ಬೆಳಕೆಂದು ಪಾರ್ವತಿ ಕೇಳಲು, ಬೀರಪ್ಪನ ಭಕ್ತನಾದ ಮಾಳಿಂಗರಾಯನು ಮಾಡಿದ ಆರತಿಯ ಬೆಳಕೆಂದು ಶಿವನು ಹೇಳುತ್ತಾನೆ. ಮಾಳಪ್ಪನನ್ನು ಪರೀಕ್ಷಿಸಲು ಪಾರ್ವತಿ ಬಯಸುತ್ತಾಳೆ.

ತಾಯಿ ಪಾರ್ವತಿಯ ಇಚ್ಛೆಯಂತೆ ಶಿವನ ಮಗಳು ಸತ್ಯವತಿ (ಶೀಲವಂತಿ) ಮಾಳಪ್ಪನನ್ನು ತಾನು ತರುವುದಾಗಿ ಹೇಳಿ ಹೊರಟಳು. ಮಾಯದ ಬಂಡಿಕಟ್ಟಿ ಕುತ್ತು (ಕಂಟಕ) ಗಳನ್ನು ಉಡಿಯಲ್ಲಿ ಹಾಕಿಕೊಂಡು ಸಿಡಿಯಾಣ ಮಠಕ್ಕೆ ಬಂದಾಗ, ಮಾರುವೇಷದಲ್ಲಿ ಎದುರಾದ ಮಾಳಪ್ಪನು ಆಕೆ ಬಂದ ಕಾರಣ ತಿಳಿದು, ಮಾಳಪ್ಪನು ಮುಂದಿನ ಮಠಕ್ಕೆ ಹೋದನೆಂದು ಹೇಳುವನು.ಹೀಗೆಯೆ ಒಂಭತ್ತು ಮಠಗಳನ್ನು ಆಕೆ ಸುತ್ತುವಂತೆ ಮಾಡುತ್ತಾನೆ. ಮಾಳನು ಬೀರಪ್ಪನಿಗೆ ಕಾಪಾಡುವಂತೆ ಮೊರೆ ಇಟ್ಟಾಗ, ನೀನೆ ಉಳಿದು ಬಂದು ನನ್ನ ಪೂಜೆ ಮಾಡಬೇಕೆಂದು ಬೀರಪ್ಪನು ಹೇಳುತ್ತಾನೆ. ಮಾಳಪ್ಪ ಹನುಮಂತನನ್ನು ಮೊರೆ ಹೋಗುತ್ತಾನೆ. ಹನುಮಂತನು ಮಾಳಪ್ಪನನ್ನು

ಕಳುಹಿಸುವುದಿಲ್ಲವೆಂದು ಶೀಲವಂತಿಗೆ ಹೇಳಿದಾಗ, ಆಕೆ ಹನುಮಂತನ ಗುಡಿಯ ಹತ್ತಿರದಲ್ಲೇ ಕಾಯುತ್ತಾ ಮಲುಗುತ್ತಾಳೆ. ಮಲಗಿದ್ದಾಗ ಮಾಳಪ್ಪ ಅವಳ ಮೂಗಿನ ನತ್ತನ್ನು ಕೆಗೆದು ಅವಳ ಉಡಿಯಲ್ಲಿ ಹಾಕುತ್ತಾನೆ. ಆಕೆ ಎದ್ದು ಮುಖ ತೊಳೆಯಲು ಹೋದಾಗ ಮೂಗಿನ ನತ್ತು ಇಲ್ಲದ್ದು ಕಂಡು ಗಾಬರಿಗೊಳ್ಳುತ್ತಾಳೆ. ಆಗ ಮಾರು ವೇಶದ ಮಾಳಪ್ಪನು ಅಕೆಯ ಉಡಿಯಲ್ಲಿರುವುದರ ಬಗೆಗೆ ತಿಳಿಸಿದ. ಅದರಂತೆ ಉಡಿಯಲ್ಲಿ ನೋಡಿದಾಗ ಆಕೆಯ ನತ್ತು ಅಲ್ಲೇ ಇದ್ದುದು ಕಂಡಿತು. ಅವಳು ಕೈಕಾಲು, ಮುಖ ತೊಳೆದು ತಿರುಗಿ ನೋಡಿದಾಗ ಅಲ್ಲಿ ಸುರದ್ರೂಪಿಯಾದ ಮಾಳಪ್ಪ ಇರುವುದನ್ನು ಕಂಡು "ನೆರಿಯ ಗಡ್ಡದ ಹಿರಿಯ ಬಾನನ ಕರಿಯ ದಡ್ಡದ ಎಳಿಯಾನೆ ೧ ಎನ್ನುತ್ತಾ, ನೀನೆ ನನ್ನ ಅಣ್ಣನೆಂದು ಶರಣಾಗುತ್ತಾಳೆ. ಅವಳಿಗೆ ಸಿಡಿಯಾಣದಲ್ಲಿಯೇ ನೆನೆಯಲು ಮಾಳಪ್ಪ ಹೇಳುತ್ತಾನೆ.

ಮೈಯೆಲ್ಲ ಹುಣ್ಣಾಗಿ ನೋಡಿದರೆ ವಾಕರಿಕೆ ಬರುವಂತೆ ಒಬ್ಬ ರೋಗಿಯ ರೂಪ ಧರಿಸಿದ ಶಿವನು ಪಾರ್ವತಿ ಸಮೇತನಾಗಿ ಸಿಡಿಯಾಣದ ಬೀರಪ್ಪನ ಗುಡಿಯ ಹತ್ತಿರ ಬಂದು ಕುಳಿತನು. ಬೀರಪ್ಪನು ಆ ವಾಸನೆ ಸಹಿಸದೆ ಕೋಪಗೊಂಡನು. ಮಾಳಪ್ಪನು ಆ ರೂಪದ ಶಿವ ಪಾರ್ವತಿಯರನ್ನು ಬೀರಪ್ಪನ ಗುಡಿಯೊಳಕ್ಕೆ ಹೊತ್ತು ತಂದನು. ಪ್ರಸನ್ನನಾದ ಶಿವನು ಅವರ ಕೋರಿಕೆಯಂತೆ ಪ್ರತಿ ದೀಪಾವಳಿಗೆ ಬರುವ ಭರವಸೆ ನೀಡಿದನು.

ಮಾಳಿಂಗರಾಯನು ಬೀರಪ್ಪನನ್ನು ಪೂಜಿಸುವ ಸಂದರ್ಭದ ವರ್ಣನೆಯು ಕಾಳಿನಾರಾಯಣ ಮತ್ತು ಬಾಳಭರಮದೇವರು ಶಿವನನ್ನು ಪೂಜಿಸುವ ವರ್ಣನೆಯನ್ನೇ ನೆನಪಿಗೆ ತರುತ್ತದೆ. ಅಲ್ಲದೆ ಒಂದೇ ತರನಾಗಿ ಆ ಎರಡೂ ಸಂದರ್ಭಗಳೂ ಕಂಡು ಬರುತ್ತವೆ. ಬೀರಪ್ಪನು ತನ್ನ ಪೂಜೆಗೆ ನಾಗರಬಾವಿಯ ನೀರನ್ನು ಖಾಸಭಾಗದ ಹೂವುಗಳನ್ನು ತಂದು ಪೂಜಿಸುವಂತೆ ಮಾಳಪ್ಪನಿಗೆ ಹೇಳುತ್ತಾನೆ. ಎಂದಿನಂತೆ ಮುಂಜಾನೆ ಪೂಜೆ ಮಾಡಿದ ಮಾಳನು ಬೀರಪ್ಪನಿಗೆ ಗಾಂಜಿ ಸೇದಲು ಕೊಟ್ಟು ಕಾಲು ಹಿಡಿದು 'ಇಟ್ಟಲ್ಲಿ ಇರಬೇಕು ಕರದಲ್ಲಿ ಬರಬೇಕು, ಎಳಗರನಾಗಿ ಬೆನ್ನ ಹಿಂದೆ ಬರಬೇಕು, ಎಂತಹ ವೇಳೆ ಬಂದರೂ ಅಂತರಲೆ ಹೋಳಾಗಬೇಕು' ಎಂದು ಬೇಡಿಕೊಂಡಾಗ ಗುರು ಗಾಂಜಿನ ಗುಂಗಿನಲ್ಲಿದ್ದು ಆಗಲಿ ಎಂದು ಭಾಷೆ ಕೊಡುತ್ತಾನೆ.

ಮಾಳಿಂಗರಾಯನು ತಾನಿದ್ದ ಜತ್ತು ನಾರಾಯಣಪುರಕ್ಕೆ (ಹುಲಿಜಂತಿ) ಬಂದು ತಾಯಿ

ಕಾಸಾಬಾಯಿ, ಹೆಂಡತಿ ಈರಮ್ಮ ಮತ್ತು ಶರಣಮ್ಮರನ್ನು ಕಂಡು ಬರುತ್ತಾನೆ. ಅಲ್ಲಿ ತಾಯಿ ಉಣಲಿಕ್ಕಿದಾಗ ತಾಯಿಗೆ ಉಂಡಂತೆ ಮಾಡಿ, ಗುರುವಿಗೆ ಉಣದಂಗ ಮಾಡಿ ಐದು ತುತ್ತು ತಿಂದು ತಾಯಿಂದ ಗೀಜಗನ ಹಳ್ಳಿಯಲ್ಲಿ ಹೂ, ಕಾಯಿ, ಸೀತಾಳ ದೊರೆಯಲಿ ಎಂದು ಆಶೀರ್ವಾದ ಪಡೆದು ಹೊರಡುತ್ತಾನೆ.

ಬೀರಪ್ಪನು ಮಾಳಿಂಗರಾಯನನ್ನು ಹುಡುಕುತ್ತಾ ಹುಲಿ ಜಂತಿಗೆ ಬರುತ್ತಾನೆ. ಅಲ್ಲಿ ಮಾಳನನ್ನು ಕಾಣದೆ ಮುಂದೆ ನಡೆದು ಬರುವಾಗ ಮಾಳಪ್ಪ ಸಿಗುತ್ತಾನೆ. ಬೀರಪ್ಪನು ತನಗೆ ಹೂ. ಕಾಯಿ, ಸೀತಾಳ ಬೇಡ ಹಿಂತಿರುಗಿ ಹೋಗೋಣವೆಂದು ಮಾಳಪ್ಪನಿಗೆ ಹೇಳಿದಾಗ, ಅದಕ್ಕೆ ಓಗೊಡದೆ ಅವುಗಳನ್ನು ತರಲು ಮಾಳಪ್ಪ ಮುಂದೆ ನಡೆಯುತ್ತಾನೆ. ಇದರಿಂದ ಗುರು ಕೋಪಗೊಳ್ಳುತ್ತಾನೆ. ಮಾಳಪ್ಪನಿಗೆ ಹೋಗುವ ದಾರಿಯಲ್ಲಿ ಅನೇಕ ಕಷ್ಟಗಳು ಎದುಗಾರುವಂತೆ ಮಾಡಿ ಬೀರಪ್ಪ ಸಿಡಿಯಾಣದ ಗುಡಿಗೆ ಬಂದು ಗದ್ದುಗೆಯಲ್ಲಿ ಕೂರುತ್ತಾನೆ. ಈ ಕಡೆ ಮಾಳಪ್ಪ ಗುರುವನ್ನು ನೆನೆದು ಕಷ್ಟಗಳನ್ನು ಗೆದ್ದು, ತುಂಬಿ ಹರಿವ ಹೊಳೆಯಿಂದ ದಾರಿ ಪಡೆದು ಮುಂದೆ ಹೊರಟನು.

ಗೀಜಗನ ಹಳ್ಳಿಯ (ಬಿಜಾಪುರ) ನಾಗರಬಾವಿ ಮತ್ತ ಖಾಸಾಬಾಗಗಳು ಧರ್ಮರಾಯನ ಅಳ್ವಿಕೆಗೆ ಸೇರಿದ್ದವು. ಗೀಜಗನ ಹಳ್ಳಿಗೆ ಬಲವಾದ ಕಾವಲಿತ್ತು. ಆಗಸಿಗೆ ಅರ್ಜುನ, ಖಾಸಭಾಗಕ್ಕೆ ಭೀಮ, ನಡು ಊರಿನಲ್ಲಿ ನಗುವುವ್ವ, ನಾಗರಬಾವಿಗೆ ಏಳು ಹೆಡೆ ಸರ್ಪ, ಏಳು ಸುತ್ತಿನ ಕೋಟೆಗೆ ನಕುಲ ಸಹದೇವ ಕಾವಲಿದ್ದಾರೆ. ಮಾಳಿಂಗರಾಯ ಗುರು ಮತ್ತು ಶಿವನನ್ನು ನೆನೆದು, ಅವರ ಕರುಣೆಯಿಂದ ಮಳೆ ತರಿಸಿದ್ದರಿಂದ ಕೋಟೆಯ ಮೇಲಿನ ಹಿಲಾಲಗಳು ನಂದಿ ಹೋಗಿ, ಕಾವಲಿನವರು ತಮ್ಮ ಆಶ್ರಯ ಸೇರುತ್ತಾರೆ. ಅರ್ಜುನ ಅಗಸಿ ಬಾಗಿಲು ಹಾಕುತ್ತಾನೆ. ಮಾಳಪ್ಪನು ಭಂಡಾರ ಒಗೆದಾಗ ಬಾಗಿಲು ತೆರೆದು ಒಳಹೊಕ್ಕು ಖಾಸಭಾಗದಲ್ಲಿ ಹೂ ಸಂಗ್ರಹಿಸಿ, ನಾಗರಬಾವಿಯಿಂದ ನೀರು ಸಂಗ್ರಹಿಸಬೇಕೆನ್ನುವಾಗ ಆತನ ಕಾಲಗೆಜ್ಜೆ ನಾದ ಕೇಳಿ ಏಳು ಹೆಡೆ ಸರ್ಪ ಬಂದು ತಡೆಯುತ್ತದೆ. ಕಣ್ಣಿಲ್ಲದ ತನಗೆ ಕಣ್ಣು ಬರುವಂತೆ ಮಾಡಿದರೆ ಬಾವಿಗೆ ಬಿಡುತ್ತೇನೆಂದಾಗ ಅದಕ್ಕೆ ಕಣ್ಣು ಬರಿಸುತ್ತಾನೆ. ಕಣ್ಣು ಪಡೆದ ಸರ್ಪ ಮಾಳಪ್ಪನನ್ನು ಕಡಿಯುತ್ತೇನೆ ಎಂದು ಹೇಳಿದಾಗ ಅದರ ನಾಲಿಗೆ ಎರಡಾಗುವಂತೆ ಮಾಡುತ್ತಾನೆ. ನಂತರ ನಾಗನಿಗೆ ನಾಗರ ಪಂಚಮಿ ಹಬ್ಬ

ಕೊಟ್ಟು ಹೆಣ್ಣು ಮಕ್ಕಳು ಹಾಲೆರೆದು ಪೂಜಿಸುತ್ತಾರೆಂದಾಗ ಮಾಳಪ್ಪನಿಗೆ ಬಾವಿಗೆ ಹೋಗಲು ದಾರಿ ಬಿಡುತ್ತದೆ. ಅನಂತರ ಜಕ್ಕಣಿಗಳ ಸಹಾಯದಿಂದ ನೀರು ತುಂಬಿಕೊಂಡು ಹೊರಡುತ್ತಾನೆ.

ಗುರು ಬೀರಣ್ಣನು ಮಾಳಪ್ಪನ್ನು ಕಾಡಲು ನಂದಿಹೋಗಿದ್ದ ಹಿಲಾಲುಗಳನ್ನು ಹೊತ್ತುವಂತೆ ಮಾಡಿ ಪಾಂಡವರನ್ನು ಎಚ್ಚರಿಸಿದ. ಭೀಮನು ಮಾಳಪ್ಪನನ್ನು ಕಂಡು ಗದೆ ಬಿಸುತ್ತಾ ಅಡ್ಡಗಟ್ಟಿ ಧರ್ಮದ ಕಟ್ಟೆಗೆ ಕರೆದನು. ಧರ್ಮರಾಯನಿಗೆ ಅವನು ಮಾಳಪ್ಪನೆಂದು ತಿಳಿದು, ಭೀಮನನ್ನು ಕರೆದು ಮಾಳಪ್ಪನಿಗೆ ದೀರ್ಘದಂಡ ನಮಸ್ಕಾರ ಮಾಡುವಂತೆ ಹೇಳಿದನು. ಧರ್ಮರಾಯನು ಮಾಳಪ್ಪನನ್ನು ಗೌರವಿಸಿ ಧರ್ಮದ ಕಟ್ಟೆಯ ಮೇಲೆ ಕಂಬಳಿ ಹಾಕಿ ಕೂರಿಸಿ ತಾನು ಆತನ ಪಕ್ಕದಲ್ಲೇ ಕುಳಿತುಕೊಂಡನು. ಮಾಳಪ್ಪನ ಹಿರೆದಿನ ಕಥೆಯನ್ನು ಹೇಳುವಂತೆ ಧರ್ಮರಾಯ ಕೇಳಿದಾಗ, ತಾವು ಕುರಿಕಾಯುವವರು ಹಿಂದಿನ ಕಥೆ ಹೇಳಲಾರೆನು ಮುಂದಿನ ಕಥೆ ಏನು ಹೇಳಲಿ ಎಂದನು. ತಾನು ಕೇಳಿದ್ದನ್ನು ಹೇಳದ ಏಳುನೂರು ಸಿದ್ಧರು ಬಂದಿಖಾನೆಯಲ್ಲಿ ಬಿದ್ದಿದ್ದಾರೆಂದೂ, ನೀನೂ ಕೂಡ ಹೇಳದಿದ್ದರೆ ಬಂಧೀಖಾನೆಯಲ್ಲಿ ಬೀಳಬೇಕಾಗುತ್ತದೆ ಎಂದು ಧರ್ಮರಾಯ ಹೇಳಿದನು. ಆಗ ಮಾಳಪ್ಪನು ಸೆರೆಯಲ್ಲಿದ್ದ ಏಳುನೂರು ಸಿದ್ಧರನ್ನು ಬಿಡಲು ತಿಳಿಸುತ್ತಾನೆ. ಧರ್ಮರಾಯನು ಭೀಮನಿಂದ ಅವರನ್ನೆಲ್ಲಾ ಬಿಡುಗಡೆ ಮಾಡಿಸುತ್ತಾನೆ. ಮಾಳಪ್ಪನು ಧರ್ಮರಾಯನಿಗೆ ಮುಂದಾಗುವ ವೈಪರೀತ್ಯಗಳನ್ನು ಹೇಳುತ್ತಾನೆ. ಧರ್ಮರಾಯನ ಊರಲ್ಲೇ ನಡೆದ ಸಂಗತಿಯೊಂದನ್ನು ತಿಳಿಸುತ್ತಾ ಕಲಮಾಯಿಯು ಬಾಣಂತಿ ಹೊನ್ನಮ್ಮಳ ರೂಪಿನಲ್ಲಿ ಅವಳ ಮನೆ ಸೇರಿ ನಿಜವಾದ ಹೊನ್ನಮಳ್ಳನ್ನೇ ಹೊರಹಾಕಿಸಿರುವುದನ್ನು ಹೇಳುತ್ತಾನೆ. ಮುಂದೆ ಗೀಜಗನ ಹಳ್ಳಿಗೆ ಬಿಜ್ಜಳಂಕ ಅರಸನಾಗಿ ಬಂದಾಗ ನಿಜ ಹೊನ್ನಮ್ಮಳಿಗೆ ನ್ಯಾಯ ದೊರೆಯುವ ಪರಿಯನ್ನು ಮಾಳಪ್ಪ ವಿವರಿಸುತ್ತಾನೆ. ಈ ಸಂದರ್ಭದಲ್ಲಿ ಕಲಮಾಯಿಯನ್ನ ಒಂದು ಬಾಟಲಿಯಲ್ಲಿ ಬಂಧಿಯಾಗುವಂತೆ ಮಾಡಿ, ಹೊನ್ನಮ್ಮಳನ್ನು ಅವಳ ಮನೆಗೆ ಕಳುಹಿಸಿಕೊಡಲಾಗುತ್ತದೆ. ಈ ಪ್ರಸಂಗವನ್ನು ಹೇಳತ್ತಾ ಮುಂದೆ ಏನೆ ಬಂದರೂ ಧರ್ಮ ಬೀಡಬೇಡಿರೆಂದು ಪಾಂಡವರಿಗೆ ಮಾಳಪ್ಪ ಎಚ್ಚರಿಕೆ ನೀಡುತ್ತಾನೆ.

ಒಂದು ದಿನ ಪಾಂಡವರಿಗೆ ಬಿಜ್ಜಳಾಂಕ ಊಟಕ್ಕೆ ಹೇಳಿ ಕಳುಹಿಸಿ, ಕಲಮಾಯಿ ಇದ್ದ ಬಾಟಲಿಯನ್ನು ಧರ್ಮರಾಯನ ಜೋಳಿಗೆಗೆ ಹಾಕುತ್ತಾನೆ. ಧರ್ಮರಾಯ ಬಾಟಲಿಯ ಬಾಯನ್ನು

ಕೊದೆಳೆಯಷ್ಟು ಸಂದು ಬಿಟ್ಟ ವೇಳೆಯಲ್ಲಿ ಶೇಖಸೈದರು ಗೀಜಗನಹಳ್ಳಿಗೆ ಮುತ್ತಿಗೆ ಹಾಕುತ್ತಾರೆ. ಹೊರಗೆ ಬಂದ ಕಲಮಾಯಿ ತೋಟ ಮಾಡಿ ಸವತೆ ಬಳ್ಳಿ ಬೆಳೆಯುತ್ತಾಳೆ. ಪಾಂಡವರು ಅಲ್ಲಿ ಕಾಯಿ ಕೀಳುತ್ತಾರೆ. ಕಲಮಾಯಿಯು ಕಳ್ಳರು ಬಂದು ನನ್ನ ಐದು ಮಕ್ಕಳನ್ನು ಒಯ್ದರೆಂದು ದೂರುಕೊಡುವಳು. ಶೇಖಸೈದರು ಬಂದು ನಿಮ್ಮನ್ನು ಹಿಡಿದು ಜೋಳಿಗೆ ನೋಡುವಾಗ ಐದು ಸವತೆ ಕಾಯಿಗಳು ಐದು ಕೂಸುಗಳಾಗಿ ಪರಿವರ್ತನೆ ಹೊಂದಿ ಕಾಣುತ್ತದೆ. ದನ ಕಾಯುವವರು ಈ ನ್ಯಾಯ ಮಾಡುವರು. ಆಗ ನೀವು ವನವಾಸಕ್ಕೆ ಹೋಗುತ್ತೀರಿ ಎಂದು ಮುಂದಾಗುವ ಎಲ್ಲ ಕಥೆಯನ್ನು ಧರ್ಮರಾಯನಿಗೆ ಮಾಳಪ್ಪ ವಿವರಿಸುತ್ತಾನೆ. ನಂತರ ಹೂವಿನ ಕಸಬ, ನೀರಿನ ಬಿಂದಿಗೆ ತೆಗೆದುಕೊಂಡು ಮಾಳಪ್ಪ ಹೋಗುತ್ತಾನೆ.

ಮಾಳಪ್ಪನು ಗೀಜಗನಹಳ್ಳಿ ದಾಟಿ ಹೋಗಬೇಕೆನ್ನುವಷ್ಟರಲ್ಲಿ ಹೂಗಾರ ಅಂಬಣ್ಣ ಬಂದು ಅಡ್ಡ ಬಿದ್ದು ತನ್ನ ಮನೆಗೆ ಕರದೊಯುತ್ತಾನೆ. ಅವನಿಗೆ ವರ್ಷಕ್ಕೊಂದು ಗಂಡು ಮಗುವಾಗಿ, ಹುಟ್ಟಿದ ಹನ್ನೊಂದನೆ ದಿನಕ್ಕೆ ಭೂತಕಾರಿ ಆ ಮಗುವನ್ನು ನುಂಗುತ್ತಿರುತ್ತದೆ. ಇದನ್ನು ಕೇಳಿದ ಮಾಳಪ್ಪ ಕೂಸಿನ ತೊಟ್ಟಿಲ ಕೆಳಗೆ ಕುಳಿತಿದ್ದು, ಭೂತಕಾರಿ ಬಾಗಿಲಲ್ಲಿ ಬಂದದ್ದನ್ನು ನೋಡಿ ಗುರುವನ್ನು ನೆನೆದು ಭಂಡಾರ ಹೊಡೆದನು. ಅದು ಮಾಳಪ್ಪನಿಗೆ ಶರಣಾಗಿ ಹೇಳಿದಂತೆ ಕೇಳಿಕೊಂಡಿರುತ್ತೀನೆಂದು ಹೇಳುತ್ತದೆ. ನಂತರ ಮಾಳಪ್ಪ ಅಂಬಣ್ಣನನ್ನು ಕುರಿತು ಇದುವರೆಗೆ ಹುಟ್ಟಿದವು ನಿನ್ನ ಮಕ್ಕಳಲ್ಲ; ಇನ್ನು ಮೇಲೆ ನಿಮ್ಮ ಮನೆಯಲ್ಲಿ ಒಬ್ಬರಿಗೆ ಒಂದೇ ಗಂಡು ಸಂತತಿ ಇರುತ್ತದೆ ಎಂದು ಆಶೀರ್ವದಿಸುತ್ತಾನೆ.

ಮಾಳಪ್ಪ ಬರುವುದನ್ನು ಅರಿತ ಬೀರಪ್ಪ ಮಾಯದ ಮಳೆ ಕರೆದನು. ಆದರೆ ಮಾಳಪ್ಪನು ಗುರುವನ್ನು ಸ್ಮರಿಸಿ ತುಂಬಿದ ಹಳ್ಳ ದಾಟಿ ಬಂದನು. ಆದರೆ ಬೀರಪ್ಪ ತಾನೆ ಮುಖ ಮರೆಸಲು ಗುಡಿ ಬಿಟ್ಟು ತಳದ ಮಾನ್ಯದ ಹೊಲದ ಹುತ್ತಿನಲ್ಲಿ ಹಾವಾಗಿ ಕುಳಿತನು. ಮಾಳಿಂಗರಾಯ ಗುಡಿಗೆ ಬಂದು ಗುರುವಿಲ್ಲದ್ದನ್ನು ನೋಡಿ, ಗುರುವಿಗಾಗಿ ಹೆಂಡರು, ಮಕ್ಕಳನ್ನು ಬಿಟ್ಟೆ, ಈಗ ಈತನೆ ಇಲ್ಲವೆಂದು ಕೋಪಗೊಂಡಿದ್ದನ್ನು ಕಂಡು ಬೀರಪ್ಪ ಗುಡಿಗೆ ಬಂದನು. ಮಾಳಪ್ಪನು ಅವನನ್ನು ಗದ್ದುಗೆಯ ಮೇಲೆ ಕೂರಿಸಿ ಪೂಜೆ ಮಾಡುತ್ತಾನೆ.

ಗುರುವಿನ ಪೂಜೆ ಮುಗಿಸಿಕೊಂಡು ಮಾಳಪ್ಪ ತನ್ನ ನಾಲ್ಕು ಮಕ್ಕಳ ಜೊತೆ

ಬಿಜ್ಜಳಗುಂತಿಯಲ್ಲಿದ್ದನು. ಇತ್ತ ನಾರಾಯಣಪುರದಲ್ಲಿದ್ದ ಮಾಳಪ್ಪನ ಹೆಂಡತಿ ಈರಮ್ಮ ಮಾಳಪ್ಪನ ಮಾತಿನಂತೆ ಅವಳ ತಂದೆ ಕೋರಿಯ ಹರಿಶ್ಚಂದ್ರರಾಯನ ಮನೆಗೆ ಹೋದಳು. ಮಾಳಪ್ಪನನ್ನು ಬಿಟ್ಟು ಇಲ್ಲಿಗೇಕೆ ಬಂದೆ? ಎಂದು ತಂದೆ ಹಿಂದಕ್ಕೆ ಹೋಗಲು ತಿಳಿಸಿದ. ಅತ್ತಿಗೆಯರು ಬಂದು ಸೀರೆ ಕುಪ್ಪಸ ಕೊಟ್ಟು ಕಳುಹಿಸಿದರು. ಸೀಮ ದಂಡಿಗೆ ಬಂದು ಐಕ್ಯಳಾಗಿ ಸೀಮಿ ಈರಮ್ಮಳಾದಳು. ಬೀರಪ್ಪ ತನ್ನ ಪೂಜೆಗೆ ಒಬ್ಬ ಮಗನನ್ನು ಬಿಡಲು ಮಾಳಪ್ಪನಿಗೆ ಒತ್ತಾಯಿಸಿದ.

## ೧೧. ಡಂಕನಾಡ ದೈಗೊಂಡ ವೃತ್ತಾಂತ

ಡಂಕನಾಡ ದೈಗೊಂಡ ದೊಡ್ಡ ಶ್ರೀಮಂತನಾಗಿದ್ದನು. ಅವನದು ಹೊನ್ನ ಹೊಸ್ತಿಲ ಚಿನ್ನದ ತೋಳ ಬಂಗಾರದ ಮೇಲಕಟ್ಟು ಇರುವ ಶ್ರೀಮಂತಿಕೆ. ಆದರೆ ಎಂದೂ ದಾನಧರ್ಮ ಮಾಡಿದವನಲ್ಲ. ಇವನ ಮನೆಗೆ ಕಲ್ಮಾಯಿ ಕಿಡಗಾಲಿಟ್ಟಳು. ಎಲ್ಲಾ ಶ್ರೀಮಂತಿಕೆ ಕರಗಿ ಭಿಕ್ಷೆ ಬೇಡುವ ಸ್ಥಿತಿ ಬಂತು. ಮನೆ ದೇವರಿಗೆ ಹರಕೆ ಹೊರಲು ಹೋದರೆ ಅವರು ಕೊಡುವುದು ನಮ್ಮ ಕೈಲಿಲ್ಲ, ಯಾರಾದರೂ ಕೊಟ್ಟರೆ ನಮಗೆ ಹರಕೆ ಮುಟ್ಟಿಸುವುದನ್ನು ಮರೆಯಬೇಡವೆಂದರು. ಹಿಂತಿರುಗಿದ ದೈಗೊಂಡ ತನ್ನ ಹೊಲದಲ್ಲಿ ರಂಟೆ ಹೊಡೆಯುತ್ತಿರುವಾಗ ಆ ಮಾರ್ಗದಲ್ಲಿ ಜನ ಘರಿಸೆ ಹೋಗುವುದನ್ನು ಕಂಡು ಎಲ್ಲಿಗೆ ಎಂದು ವಿಚಾರಿಸಿದನು. ಮೂಡಲ ದಿಕ್ಕಿನಲ್ಲಿರುವ ಕ್ವಾಣಗನೂರ ಮಠಕ್ಕೆ (ಬೀರಪ್ಪನ ಮಠ) ಹೋಗುವುದಾಗಿ ಹೇಳಿದರು. ತಾನೂ ಬರುವೆನೆಂದು ಹೇಳಿ, ಮನೆಗೆ ಹೋಗಿ ಹೆಂಡತಿಗೆ ತಿಳಿಸಿ ಘರಿಸೆಯೊಂದಿಗೆ ಹೊರಟನು.

ಭಕ್ತರು ಬೀರಪ್ಪನಿಗೆ ಹರಕೆ ಸಲ್ಲಿಸಿದ ನಂತರ ಮಾಳಪ್ಪ ಅವರನ್ನು ಬೀಳ್ಕೊಟ್ಟನು. ದೈಗೊಂಡನು ಬೀರಪ್ಪನ ಮುಂದೆ ಒಂಟಿಕಾಲಲ್ಲಿ ನಿಂತು ಧ್ಯಾನ ಮಾಡುವಾಗ ಅವನ ಪರಿಚಯ ಕೇಳಿ ತಿಳಿದು ಅವನಿಗೆ ಶ್ರೀಮಂತಿಕೆ ಕೊಡುವುದು ಉಚಿತವಲ್ಲವೆಂದು ಬೀರಪ್ಪ ಹೇಳಿದರೂ ಬಿಡದೆ ಮಾಳಪ್ಪ ಒತ್ತಾಯಿಸಿ ವರ ಕೊಡಿಸಿದನು. ದೈಗೊಂಡ ಹರಕೆ ಸಲ್ಲಿಸುವುದಾಗಿ ಹೇಳಿ ವಚನ ನೀಡಿದನು.

ಅಲ್ಲಿಂದ ಬೀಳ್ಕೊಂಡು ದೈಗೊಂಡ ಬರುವಾಗ ಒಣಗಿದ ಬಾವಿಗಳಲ್ಲಿ ನೀರು ಕಂಡಿತು. ಬಂಜೆಯರು ಮಕ್ಕಳನ್ನು ಪಡೆಯುವಂತಾದರು. ಊರಿನ ಜನರೆಲ್ಲ ಮುಂದಾಗಿ ದೈಗೊಂಡನ ಹೊಲಗಳನ್ನು ಉತ್ತಿ ಬಿತ್ತಿದರು, ಹೊಲದಲ್ಲಿ ಬೆಳೆದ ಹೀರೇಕಾಯಿಯನ್ನು ತಂದು ಹೋಳು

ಮಾಡಿದಾಗ ಮುತ್ತು ರತ್ನಗಳು ಸುರಿದವು. ಇದನ್ನು ನೋಡಿ ಸಂತೋಷಗೊಂಡ ದೈಗೊಂಡನು ಹೊಲದಲ್ಲಿಯ ಎಲ್ಲಾ ಹೀರೇ ಕಾಯಿಗಳನ್ನು ತಂದು ಮುತ್ತಿನ ರಾಶಿ ಮಾಡಿದನು. ಈ ಎಲ್ಲಾ ಸಂಪತ್ತು ಮನೆ ದೇವರುಗಳಾದ ಎಡವೂರು ಮಲ್ಲಯ್ಯ, ಬಲವೂರಿ ಮಲ್ಲಯ್ಯ, ತಿರುಮಲಗೇರಿ ತಿಮ್ಮಯ್ಯ, ಚಿತ್ತಪೆಟ್ಟಿ ದ್ಯಾವಮ್ಮ ಕೊಟ್ಟರೆಂದು ಭಾವಿಸಿ ಅವರಿಗೆ ಹರಕೆ ಮುಟ್ಟಿಸಲು ಸಜ್ಜಾದನು. ಮತ್ತೆ ಶ್ರೀಮಂತಿಕೆ ಹೊಂದಿದ ದೈಗೊಂಡನು ಬೀರಪ್ಪ ಮತ್ತು ಮಾಳಪ್ಪರನ್ನು ಮರೆತು, ತನ್ನ ಮನೆದೇವರುಗಳಿಗೆ ಊರವರೊಡನೆ ಘರಿಸೆ ಹೋಗಿ ಹರಕೆ ಸಲ್ಲಿಸಿದನು. ದೈಗೊಂಡನು ಶ್ರೀಮಂತಿಕೆ ಕೊಟ್ಟ ತಮ್ಮನ್ನು ಮರೆತು ತನ್ನ ಮನೆ ದೇವವಿಗೆ ಹರಕೆ ಸಲ್ಲಿಸಿದ್ದನ್ನು ಕಂಡು ಬೀರಪ್ಪ ಮಾಳಿಂಗರಾಯನನ್ನು ದೂರುತ್ತಾನೆ. ತಾನು ಬೇಡವೆಂದರೂ ಹರಕೆಯ ಹಬ್ಬದ ಆಸೆಗೆ ಅವನಿಗೆ ಶ್ರೀಮಂತಿಕೆ ಕೊಡಿಸಿದ್ದಕ್ಕೆ ಬೀರಪ್ಪ ಮಾಳಪ್ಪನನ್ನು ಆಕ್ಷೇಪಿಸುತ್ತಾನೆ.

ಮಾಳಪ್ಪನು ದೈಗೊಂಡನ ನಾಡಿಗೆ ಬಂದು ಅವನ ಸೇನೆಗೆ ಸಿಗದೆ ಡಂಕನಾಡನ್ನು ಪ್ರವೇಶಿಸುತ್ತಾನೆ. ದೈಗೊಂಡನಿಗೆ ಉಸಿರು ಕಟ್ಟಿದದಂತಾಗಿ ಸೂಜಿ, ಡಬ್ಬಣದಲ್ಲಿ ಚುಚ್ಚಿದ ಅನುಭವವಾಗುತ್ತದೆ. ಅವನ ಹೆಂಡತಿ ನೀಲಲೋಚನೆ ಗಂಡನ ಎದೆಯ ಮೇಲೆ ಕುಳಿತಂತಿರುವವನ ರೂಪು ಕೇಳಿ ಆತ ಬೀರಪ್ಪನೆಂದು ತಿಳಿದು ಕ್ವಾಣಗನೂರು ಮಠಕ್ಕೆ ಬರುವುದಾಗಿ ಹರಕೆ ಹೊರುತ್ತಾಳೆ.

ಹನ್ನೆರಡುನೂರು ದಂಡಿನೊಡನೆ ಕ್ವಾಣಗನೂರ ಮಠಕ್ಕೆ ದೈಗೊಂಡನು ಘರಿಸೆ ಕಟ್ಟಿಕೊಂಡು ಬಂದನು. ಮಾಳಪ್ಪ ಕೈಗೆ ಸಿಕ್ಕರೆ ಅವನನ್ನು ಬಿಡಬಾರದೆಂದು ದಂಡಿಗೆ ಆಜ್ಞೆ ಮಾಡಿದನು. ಅಲ್ಲಿ ಪೂಜಾರಿಕೆ ಮಾಡುತ್ತಿದ್ದ ಕಂಠಿಕರಕ್ಯಾಮಣ್ಣ ಗುರುವಿನ ಸೂಚನೆ ಮೇರೆಗೆ ಮಾಳಪ್ಪನನ್ನು ಕರತರಲು ಹುಲಿ ಜಂತಿಗೆ ಬಂದನು. ಮಾಳನ ತಾಯಿ ಕಾನವ್ವಳಿಂದ ಬಿಜ್ಜಳಗುಂತಿಯಲ್ಲಿರುವನೆಂದು ತಿಳಿದು ಅಲ್ಲಿಗೆ ಬಂದಾಗ ತನ್ನ ನಾಲ್ಕು ಮಕ್ಕಳೊಂದಿಗೆ ಕುರಿಕಾಯುತ್ತಿದ್ದ ಮಾಳಪ್ಪ ಭೇಟಿಯಾದನು.

ಭಜನೆ ಮೇಳದೊಂದಿಗೆ ಹೊರಟು ಮಾಳಪ್ಪ ಚಿಕ್ಕಳ್ಳಿಗೆ ಬರುತ್ತಾನೆ. ಅಲ್ಲಿ ಹೆಣ್ಣು ಮಗಳು ಕಂಕುಳಲ್ಲಿ ಮಗು ಎತ್ತಿಕೊಂಡು ಮಾಳಪ್ಪನನ್ನು ಅಡ್ಡಗಟ್ಟಿ ಊಟಕ್ಕೆ ಕರೆಯುತ್ತಾಳೆ. ಅವಳ ಮಗುವಿನೊಡನೆ ಊಟಕ್ಕೆ ಕೂತ ಮಾಳಪ್ಪ ಮಗುವನ್ನು ಮಾಯ ಮಾಡುತ್ತಾನೆ. ಆದರೆ ಆಕೆ ಧೈರ್ಯಗುಂದದೆ ಮನೆಗೆ ಹೋಗಿ ನೋಡಲು ಮಗು ತೊಟ್ಟಿಲಲ್ಲಿ ಆಡುತ್ತಿರುತ್ತದೆ. ಹೀಗೆ

ಪವಾಡ ಮೆರೆದು ಅಲ್ಲಿಂದ ಮುಂದೆ ಹಿರಿ ಹೊಳೆಯನ್ನು ಅಂಬಿಗನ ಸಹಾಯದಿಂದ ದಾಟಿ, ದಡದ ನೀರು ಕಾಲಿಗೆ ಸೋಕದಂತೆ ಕಂಬಳಿ ಹಾಸಿ ದಾಟುತ್ತಾನೆ.

ಮಾಳಿಂಗರಾಯನು ಕ್ವಾಣಗನೂರು ಮಠಕ್ಕೆ ಬಂದು ದೈಗೊಂಡನು ಹಾಕಿದ ಹತಿಯಾರದ ಹಂದರಗಳನ್ನು ನುಗ್ಗುನರಿ ಮಾಡುತ್ತಾನೆ. ದೈಗೊಂಡನು ವಿಷ ಹಾಕಿದ್ದ ಬಾವಿಯಲ್ಲಿ ಜಿಗಿದು ಮುಂಡಗನೂರ ಮಠದಲ್ಲಿ ತೇಲುತ್ತಾನೆ. ಕಂಟಿಕ್ಯಾಮಣ್ಣನು ಎಮ್ಮಟ್ಟಿ ಎಮರಾಯನಿಂದ ಮಾಳಿಂಗರಾಯನಿರುವ ಸ್ಥಳ ತಿಳಿದು ಮುಂಡಗನೂರ ಮಠಕ್ಕೆ ಬಂದು ಮಾಳಪ್ಪನನ್ನು ಪಲ್ಲಕ್ಕಿಯಲ್ಲಿ ಕರೆತರುತ್ತಾನೆ. ಈಗ ದೈಗೊಂಡನು ತಾನು ಸೋತನೆಂದು ಒಪ್ಪಿಕೊಳ್ಳುತ್ತಾನೆ.

## ೧೨. ಅಮೋಗಸಿದ್ಧನ ವೃತ್ತಾಂತ

ಶಿವನನ್ನು ಪೂಜಿಸುತ್ತಾ ಕೈಲಾಸದಲ್ಲಿದ್ದ ಅಮೋಗಿಸಿದ್ಧನು ಶಿವನಂತಹ ಗುರು, ತನ್ನಂತಹ ಶಿಷ್ಯ ಲೋಕದಲ್ಲೇ ಇಲ್ಲವೆಂದು ಗರ್ವ ಪಡುತ್ತಾನೆ. ಅದಕ್ಕೆ ಶಿವನು ಮಾಳಿಂಗರಾಯನೆಂಬ ಹೆಚ್ಚಿನ ಶಿಷ್ಯನಿದ್ದಾನೆಂದು ಹೇಳಿದಾಗ ಆತನನ್ನು ಪರೀಕ್ಷಿಸಲು ಬಯಸಿ, ಶಿವನನ್ನು ತನ್ನೊಡನೆ ಇರಬೇಕೆಂದು ಕೇಳಿಕೊಳ್ಳುತ್ತಾನೆ. ಇಬ್ಬರೂ ಕೂಡಿ ಮೂರೂರು ಮುಮ್ಮೆಟ್ಟಿ ಮೇಲೆ ಇಳಿದು ಮಕಣಾಪುರಕ್ಕೆ ಬಂದಾಗ ಶಿವ ಮಾಯವಾದನು.

ಅಮೋಗಿಸಿದ್ಧನು ಮುತ್ತುಗಾರನಾಗಿ ಹುಲಜಂತಿಗೆ ಬಂದಾಗ ಮಾಳಪ್ಪ ಎದುರಾದನು. ಅವರಿಬ್ಬರ ನಡುವೆ ಒಂದು ಶಕ್ತಿಯ ಸ್ಪರ್ಧೆಯೇ ನಡೆಯಿತು. ಸ್ಪರ್ಧೆಯಲ್ಲಿ ಅಮೋಗಿಸಿದ್ಧನು ತಾನು ಸೋತುದಾಗಿ ಒಪ್ಪಿಕೊಂಡು ಬಿಳಿನಂದಿ, ಕರಿಕಂಬಳಿ, ಪರಸದಗಂಟು ಸಹಿತ ತನ್ನ ವಿದ್ಯೆಯನ್ನೆಲ್ಲ ಮಾಳಪ್ಪನಿಗೆ ಒಪ್ಪಿಸಿದನು. ಮಾಳಪ್ಪನು ಅಮೋಗಿಸಿದ್ಧನನ್ನು ಜತ್ತುನಾರಾಯಣಪುರಕ್ಕೆ ಕರೆದೊಯ್ದು ತನ್ನ ತಾಯಿ ಮಾಡಿದ ಊಟ ಮಾಡಿಸಿ ಐದು ಕುರಿಗಳನ್ನು ಕೊಟ್ಟು ತನ್ನ ಅಣ್ಣ ಜಕ್ಕರಾಯನಿರುವ ಏಣಕಿ ಊರಿಗೆ ಕಳುಹಿಸಿ ಅಲ್ಲಿ ಅವನಿಂದ ಐದುಕುರಿಗಳನ್ನು ಪಡೆಯಲು ಹೇಳಿದನು. ಜಕ್ಕರಾಯನು ಕೂಡ ಐದು ಕುರಿಗಳನ್ನು ಕೊಟ್ಟನು. ಈ ಹತ್ತು ಕುರಿಗಳನ್ನು ಪ್ರತ್ಯೇಕ ದೊಡ್ಡಿಯಲ್ಲಿ ಹಾಕಿ ಮಲಗಿದರು. ಆ ರಾತ್ರಿ ಹತ್ತು ಕುರಿಗಳೂ ಸತ್ತವು. ಅಮೋಗಿಸಿದ್ಧ ಬರಿಗೈಲಿ ಹೊರಟು ಮೂರೂರ ಮುಮ್ಮೆಟ್ಟಿಗೆ ಬಂದು ಭೂತಾಳ ಸಿದ್ಧನಿಗೆ ತನ್ನ ಪರಿಸ್ಥಿತಿ ತಿಳಿಸಿದ. ಅಮೋಗಿಸಿದ್ಧ ಮತ್ತು ಭೂತಾಳಸಿದ್ಧರು ಕೂಡಿ ಕಲ್ಯಾಣಕ್ಕೆ ಹೊರಟರು.

---

ಕುಂಬಾರ ಗುಂಡಯ್ಯನಿಗೆ ಮಕ್ಕಳಿರಲಿಲ್ಲ. ಅಮೋಗಿಸಿದ್ಧನನ್ನು ಬೇಡಲು ಹುಟ್ಟಿದ ಮಗುವನ್ನು ಮುಮ್ಮಟ್ಟಿ ಗುಡ್ಡದಲ್ಲಿ ಬಿಡಬೇಕೆಂಬ ಮಾತಿನ ಮೇಲೆ ಮಕ್ಕಳ ಫಲ ಕರುಣಿಸಿದನು. ಅದರಂತೆ ಗುಂಡಯ್ಯನ ಮಡದಿ ನೀಲಮ್ಮ ಗರ್ಭವತಿಯಾಗಿ ಗಂಡುಮಗು ಹಡೆದಳು. ಮಗುವಿಗೆ ಮಳಸಿದ್ದಪ್ಪನೆಂದು ಹೆಸರಿಟ್ಟರು. ಈತನೇ ಅಮೋಗಿಸಿದ್ಧನ ಸಾಕುಮಗನಾದನು.

ಅಗಸರ ನೀಲಮ್ಮ ಊರ ಬಟ್ಟೆ ಒಗೆಯಲು ಹಳ್ಳಕ್ಕೆ ಹೋದಾಗ ಅವಳ ಮಗ ಹಿಂಬಾಲಿಸಿ ನೀರಲ್ಲಿ ಬಿದ್ದು ಕೊಚ್ಚಿ ಹೋಯಿತು. ಮನೆಗೆ ಬಂದ ಆಕೆ ತನ್ನ ಮಗು ಕಾಣದೆ ಎಲ್ಲ ಕಡೆ ಹುಡುಕಾಡಿದಳು. ಎರಡು ಮೂರುದಿನ ಕಳೆಯಿತಾದರೂ ಮಗು ಕಾಣಲಿಲ್ಲ. ಊರಗೌಡರ ಮನೆಯಲ್ಲಿದ್ದ ಅಮೋಗಿಸಿದ್ಧನಿಗೆ ಕೇಳಿಕೊಂಡಾಗ ಹಳ್ಳದ ದಡಕ್ಕೆ ಹೋಗಿ ಮಗನ ಹೆಸರು ಹಿಡಿದು ಕರೆಯಲು ಹೇಳಿದ. ಅದರಂತೆ ಕರೆದಾಗ ನೀರಿನಿಂದ ಮಗ ಓಡಿ ಬಂದನು.

ಅಮೋಗಿಸಿದ್ಧ ಮತ್ತು ಭೂತಾಳಿಸಿದ್ಧ ನಡುವಟ್ಟಿ ಊರಿಗೆ ಬರುತ್ತಾರೆ. ಅಲ್ಲಿನ ಅರಸ ನಾಗರಾಯ ಕಟ್ಟುತ್ತಿದ್ದ ಕೆರೆ ಆರು ತಿಂಗಳಿಗೊಮ್ಮೆ ಒಡೆಯುತ್ತಿತ್ತು. ಅಮೋಗಿಸಿದ್ಧನಿಗೆ ಕೇಳಿದಾಗ ತಾನು ಕಲ್ಯಾಣಕ್ಕೆ ಹೋಗುತ್ತಿರುವುದಾಗಿ ಹೇಳಿ, ಅಲ್ಲಿಂದ ಬರುವಾಗ ಅದರ ಬಗ್ಗೆ ಹೇಳುತ್ತೇನೆ ಎಂದನು. ಅದಕ್ಕೆ ಕೆರೆ ಒಡೆಯದೆ ನಿಲ್ಲುವಂತೆ ಮಾಡಿದರೆ ಮಗಳಕೊಟ್ಟು ಮದುವೆ ಮಾಡುವುದಾಗಿ ರಾಜ ಸಾರಿಸಿದ್ದ. ಅಮೋಗಿಸಿದ್ಧ ಬಂದು ಹೋದಂದಿನಿಂದ ವಾಪಸ್ಸು ಬರುವವರೆಗೆ ಕೆರೆ ಒಡೆಯಲಿಲ್ಲವಾದ್ದರಿಂದ ಮಗಳು ಪದ್ಮಾವತಿ ಅಮೋಗಿಸಿದ್ಧನಿಗೆ ಮದುವೆ ಮಾಡಿಕೊಡುವಂತೆ ಹಟ ಹಿಡಿದಳು. ಕೊನೆಗೆ ಅವರೀರ್ವರಿಗೂ ಮದುವೆಯಾಯಿತು. ಮಗಳನ್ನು ಅಮೋಗಿಸಿದ್ಧನಲ್ಲಿಗೆ ಕಳುಹಿಸಿದರು. ಅರಕೇರಿ ಎಂಬ ಊರಿನ ಮನೆಯಲ್ಲಿ ಪದ್ಮಾವತಿ ಉಳಿದಳು. ಅಮೋಗಿಸಿದ್ಧನು ಮೂರೂರು ಮುಮ್ಮಟ್ಟಿ ಗುಡ್ಡ ಸೇರಿದನು.

ಅಮೋಗಿಸಿದ್ಧನು ಗುಡ್ಡ ಸೇರಿದ್ದರಿಂದ ಸಾಧುವಾಗಿ ಗುಡ್ಡಸೇರಿದನೆಂದು ಪದ್ಮಾವತಿ ಆಡಿಕೊಂಡಳು. ಇವಳಿಗೆ ಮಕ್ಕಳಾಗಲಿಲ್ಲ. ಈ ಸುದ್ದಿ ತಿಳಿದ ಕಲ್ಯಾಣದ ಕುಂಬಾರನು ಮಳಸಿದ್ಧಪ್ಪನನ್ನು ಅಮೋಗಿಸಿದ್ಧನಲ್ಲಿಗೆ ತಂದು ಬಿಟ್ಟನು. ಮಳಸಿದ್ಧಪ್ಪನು ಪದ್ಮಾವತಿಯಲ್ಲಿಗೆ ಬಂದು ಆಶೀರ್ವಾದ ಪಡೆದು ಸಾಕು ಮಗನಾಗಿ ಉಳಿದನು. ಅಮೋಗಿಸಿದ್ಧನಲ್ಲಿಗೆ ಬಂದ ಮಳಸಿದ್ಧಪ್ಪ ತಂದೆ ತಂಗಿ, ತಮ್ಮಂದಿರಿಲ್ಲ ಎಂದಾಗ ಅಮೋಗಿಸಿದ್ಧನು ಐದು ಉತ್ತತ್ತಿ ಹಣ್ಣುಗಳನ್ನು ತರಿಸಿ, ಮಂತ್ರಿಸಿ

ಕಳುಹಿಸಿಕೊಟ್ಟನು. ಮಳಸಿದ್ಧಪ್ಪನು ಅವುಗಳನ್ನು ಪದ್ಮಾವತಿಗೆ ನೀಡಿದನು. ಅವಳು ಜಗಲಿಯ ಮೇಲೆ ಅವುಗಳನ್ನು ಇಡಲು ಒಂದು ಹೆಣ್ಣು, ನಾಲ್ಕು ಗಂಡು ಮಕ್ಕಳಾಗಿ ರೂಪು ಪಡೆದವು. ಮಳಸಿದ್ಧಪ್ಪನ ಜೊತೆ ನಾಲ್ಕು ಗಂಡು ಮಕ್ಕಳು ಅಮೋಗಿಸಿದ್ಧನ ಬಳಿಗೆ ಬಂದು ಆಶೀರ್ವಾದ ಪಡೆದರು.

ನಾಲ್ಕುಜನ ಮಕ್ಕಳಿಗೆ ತೇಜಕೊಟ್ಟು ಅಮೋಗಿಸಿದ್ಧನು ಅವರನ್ನು ಗೀಜಗನಹಳ್ಳಿ ರಾಜಕೀಯ ನೋಡಿಕೊಳ್ಳಲು ಕಳುಹಿಸಿದನು. ಮಳಸಿದ್ಧಪ್ಪನು ಅಮೋಗಿಸಿದ್ಧನ ಬಳಿಯೇ ಉಳಿದಿದ್ದರಿಂದ ಮಕ್ಕಳು ಅನುಮಾನಿತರಾಗಿ ಅಪ್ಪನ ಗಂಡನ್ನು ಮಳಸಿದ್ಧಪ್ಪ ಒಬ್ಬನೇ ಒಯ್ಯುತ್ತಾನೆಂದು ಸಂಶಯಪಟ್ಟು ಹಿಂದಿರುಗಿದರು. ಈ ವೇಳೆಗೆ ಮಳಸಿದ್ಧಪ್ಪನು ಅರಕೇರಿಗೆ ಬಂದು ತಾಯಿಗೆ ನಮಸ್ಕರಿಸಿ ಅಮೋಗಿಸಿದ್ಧನು ತರಹೇಳಿದ್ದಾನೆಂದು ತಿಳಿಸಿ ಮಳೆಕೀಲ, ಬೆಳೆಕೀಲಗಳನ್ನೆಲ್ಲಾ ಗಂಟುಕಟ್ಟಿ ಪಡೆದು ಹೊರಟು ಹೊಳೆಯ ದಡಕ್ಕೆ ಬಂದನು. ನಾಲ್ಕು ಜನ ಮಕ್ಕಳು ತಂದೆ ಬಳಿಗೆ ಬಂದು ಅಲ್ಲಿ ಮಳಸಿದ್ಧಪ್ಪ ಇಲ್ಲದ್ದನ್ನು ಕಂಡು ತಾಯಿ ಬಳಿಗೆ ಬಂದರು. ಅದೇ ತಾನೆ ಮಳಸಿದ್ಧಪ್ಪ ಅಪ್ಪನ ಗಂಟು ಪಡೆದು ಹೋದದ್ದನ್ನು ತಿಳಿದು ಅವನನ್ನು ಸಿಕ್ಕಲ್ಲೇ ಹೊಡೆಯಲು ಹೊರಟರು. ಆಗ ತಾಯಿ ಅವನು ಹೊಳೆಯ ದಂಡೆಯಲ್ಲಿ ಭೇಟಿಯಾದರೆ ಮನಸ್ಸು ಬಂದಂತೆ ಮಾಡಿ. ಆದರೆ ಹೊಳೆಗೆ ಇಳಿದಿದ್ದರೆ ನೀವು ನೀರಿಗೆ ಇಳಿಯಬೇಡಿ, ಇಳಿದರೆ ತಿರುಗಿ ನೀವು ಬರುವುದಿಲ್ಲ ಎಂದು ಎಚ್ಚರಿಸುತ್ತಾಳೆ. ಅವರು ಹೊಳೆಯ ಬಳಿ ಬರುವಷ್ಟರಲ್ಲಿ ಮಳಸಿದ್ಧಪ್ಪ ಹೊಳೆಯ ನಡವಿನ ಒಂದು ಗಡ್ಡೆಯಲ್ಲಿ ನಿಂತಿದ್ದನು. ವಾಪಸ್ಸು ಬಂದು ಗಂಟು ಕೊಡುವಂತೆ ಇವರು ಹೇಳಿದಾಗ, ತಾನು ಬರುವುದಿಲ್ಲವೆಂದೂ ಗಂಟು ಬೇಕಾದರೆ ತೆಗೆದುಕೊಳ್ಳಿ ಎಂದು ಹೊಳೆಯಲ್ಲಿ ಬಿಡುತ್ತಾನೆ. ಗಂಟು ದೂರ ಸಾಗದೆ ಮಳಸಿದ್ಧಪ್ಪನ ಸುತ್ತ ಅಲ್ಲಿಯೇ ಸುತ್ತ ತೊಡಗುತ್ತದೆ. ಈ ನಾಲ್ಕು ಜನರು ಅವನಿಗೆ ಗಂಗನಾಡಿಗೆ ಬೇಡಿಕೊಂಡು ಹೋಗೆಂದು ಶಾಪ ಕೊಟ್ಟು ಹೊರಡುತ್ತಾರೆ. ಹೊಳೆಯನ್ನು ದಾಡಿ ಬಂದ ಮಳಸಿದ್ಧಪ್ಪ ಅವರ ಶಾಪದಂತೆ ಕಟಗರ ಕೇರಿಯಲ್ಲಿ ವಾಸವಿದ್ದು, ಸೊನ್ನಲಗೇರಿಯಲ್ಲಿ ಸಿದ್ಧರಾಮ ಕರೆಕಟ್ಟಿಸುತ್ತಿರುವಲ್ಲಿ ತಾನೂ ಕೆಲಸಕ್ಕೆ ನಿಲ್ಲುತ್ತಾನೆ.

## ೧೩. ಪಾಂಡುರಂಗನ ವೃತ್ತಾಂತ

ಪಾಂಡುರಂಗನು ಲಿಂಗ ತರಲು ಯೋಚನೆ ಮಾಡಿ ಫಂಡರಪುರ ಬಿಟ್ಟು ಮಾಳಿಂಗರಾಯನಲ್ಲಿಗೆ ಬಂದನು. ಮಾಳಿಂಗನು ಗುರು ಬೀರಣ್ಣನಿಗೆ ಒಪ್ಪಿಸಿ ಹಾಲಹಳ್ಳದಲ್ಲಿ ಲಿಂಗವಾಗಿರಲು ತಿಳಿಸಿದನು. ಅನಂತರ ಹಾಲಹಳ್ಳದಲ್ಲಿ ಲಿಂಗವಿರುವುದನ್ನು ಪಾಂಡುರಂಗನಿಗೆ ಮಾಳಪ್ಪನು ತೋರಿಸಿ, ತರಲು ಹೇಳಿದನು. ಪಾಂಡುರಂಗನು ತರಲು ಹೋದಾಗ ಲಿಂಗ ಮುಂದೆ ಮುಂದೆ ಚಲಿಸತೊಡಗಿದ್ದರಿಂದ ಹಿಂಬಾಲಿಸುತ್ತಾ ಹನ್ನೆರಡು ಹರಿದಾರಿ ಬೆನ್ನುಹತ್ತಿ ಸಾಗಿದನು. ಒಂದು ಕರಿಯಕಲ್ಲಿನ ಮರಿಯಲ್ಲಿ ಲಿಂಗ ನಿಂತಿತು. ಅದನ್ನೆತ್ತಲು ಯತ್ನಿಸಿದಂತೆ ಬೇರೂರಿ ಲಿಂಗ ನಿಂತಾಗ ಅಲ್ಲೇ ಅದನ್ನು ಮೂರು ದಿನ ಪೂಜಿಸಿದನು.

ಮೂರು ದಿನಗಳ ನಂತರ ಧರಿಯಾ ಎಂಬ ಊರಿಗೆ ಬಂದು ಶ್ರೀಮಂತ ನಂದಣ್ಣನ ಮನೆಗೆ ಹೋಗಿ ಭಿಕ್ಷೆ ಬೇಡಿ ಅಪಮಾನಿತನಾಗಿ ಬಂದು, ಅವನ ತಮ್ಮ ಬಡವನಾದ ಧೋಳಗೊಂಡನ ಮನೆಗೆ ಬಾಲಕನ ವೇಷದಲ್ಲಿ ಬಂದಾಗ ಅವನನ್ನು ಮನೆಗೆ ಕರೆದು, ಜ್ವಾಳ ಬೀಸಿ ಅಂಬಲಿಯನ್ನಿತ್ತು ಉಪಚರಿಸಿದರು. ಪಾಂಡುರಂಗನು ಧೋಳಗೊಂಡನಿಗೆ ಶ್ರೀಮಂತಿಕೆಯನ್ನೂ, ಅವನ ಅಣ್ಣ ನಂದಣ್ಣನಿಗೆ ಬಡತನವನ್ನೂ ನೀಡಿದನು. ಧೋಳಗೊಂಡನ ಏಳು ಕುರಿಗಳನ್ನು ಪಾಂಡುರಂಗ ಮೇಯಿಸುತ್ತಾ, ಅವು ಮರಿಹಾಕಿ ಗಿಣ್ಣು ಹಾಲು ನೀಡಿ ಊರೆಲ್ಲಾ ಗಿಣ್ಣು ಸವಿಯುವಂತಾಗುತ್ತದೆ. ಪಾಂಡುರಂಗನು ಧೋಳಗೊಂಡನಿಗೆ ಕರಿಯ ಕಲ್ಲಿನ ವಾರಿಯಲ್ಲಿದ್ದ ಲಿಂಗವನ್ನು ತೋರಿಸುತ್ತಾನೆ. ಅವರೆಲ್ಲಾ ಆ ಲಿಂಗಕ್ಕೆ ಭಕ್ತಿಯಿಂದ ನಡೆದುಕೊಳ್ಳತೊಡಗುತ್ತಾರೆ.

## ೧೪. ಇತರ ಶರಣರ ವೃತ್ತಾಂತಗಳು

**ರೇವಣಸಿದ್ಧನ ವೃತ್ತಾಂತ :** ಗುರು ರೇವಣಸಿದ್ಧರು ಶರಣ ತಿಂಗಳ ಕಡೆಯ ಸೋಮವಾರ ಹಾಲಿನ ಭಿಕ್ಷಕ್ಕೆ ಹಾರೂರ ಗುಂಡವ್ವನ ಮನೆಗೆ ಹೋದಾಗ ಆಕೆ ನೀಡಲಿಲ್ಲ. ಕುರುಬರ ಸಿದ್ದವ್ವನ ಮನೆಗೆ ಬಂದು ಬೇಡಿದಾಗ ಆಕೆ ಮಡಿಯುಟ್ಟು, ಗೆಜ್ಜೆ ಬಿಂದಿಗೆ ಹಿಡಿದು, ಹುಟ್ಟು ಗ್ವಾಮಾರಿ ಆಕಳ ಹಾಲು ಬಿಟ್ಟು, ಮೀಸಲ ಹಾಲ ಕೊಡುವಳು. ರೇವಣಸಿದ್ಧನು ಹಾಲು ಸವಿದು ನಿನ್ನ ದೊಡ್ಡಿ ದೊಡ್ಡದಾಗಲಿ ಎಂದು ಹರಸಿದನು.

ಮುಂದೆ ಅಗಸರ ಮಡಿವಾಳನ ಮನೆಗೆ ಹೋಗಿ ಮುತ್ತು ರತ್ನ ಭಿಕ್ಷೆ ನೀಡಲು ಬಂದಾಗ

ಸ್ವೀಕರಿಸದೆ ತನ್ನ ಎರಡು ಕಂತಿಗಳಿಗೆ (ಬಟ್ಟೆ) ಗಂಜಿ ಮಾಡಿಕೊಡಲು ಹೇಳುತ್ತಾನೆ. ಆದರೆ ಕಟಗಿ, ಸುಣ್ಣ, ಬಟ್ಟೆ, ನೀರು. ಬೆಂಕಿಕಡ್ಡಿ, ಸಾಬೂನು ಕಲ್ಲು ಯಾವುದನ್ನೂ ಉಪಯೋಗಿಸಬಾರದೆಂದು ಅವನ ಕೋರಿಕೆ ಮುಂದಿಡುತ್ತಾನೆ. ಇದನ್ನು ತಿಳಿದ ಮಡಿವಾಳನ  ಮಡದಿ ನೀಲಮ್ಮ ತನ್ನ ಕುತ್ತಿಗೆಯನ್ನೇ ಕತ್ತರಿಸುವಂತೆ ಗಂಡನಿಗೆ ಹೇಳಿ, ರಕ್ತವನ್ನೇ ಆಳಿ ಮಾಡಿ, ಅಂಗೈ ಬಂಡಿಮಾಡಿ, ಮೆದುಳ ಸಾಬೂನು ಮಾಡಿ, ತಲೆಯ ಡೋಗಿಯೇ ಪಾತ್ರೆ ಮಾಡಿ ಕಂತಿಗಳಿಗೆ ಗಂಜಿ ಹಾಕಲು ತಿಳಿಸುತ್ತಾಳೆ. ಹೀಗೆ ಸಿದ್ಧ ಮಾಡಿದ ಮಡಿಯಾದ ಕಂತಿಗಳನ್ನು ಮಾರನೆದಿನ ಬಂದ ರೇವಣಸಿದ್ಧನಿಗೆ ನೀಡುವಾಗ, ದಂಪತಿಗಳು ಒಟ್ಟಾಗಿ ಕೊಡುವಂತೆ ಹೇಳುತ್ತಾನೆ. ಮಡಿವಾಳನು ಮಡದಿಯನ್ನು ಕರೆದಾಗ ಆಕೆ ಓಗೊಡುತ್ತಾಳೆ. ನಂತರ ದಂಪತಿಗಳು ಒಟ್ಟಾಗಿ ರೇವಣಸಿದ್ಧನಿಗೆ ಬಟ್ಟೆಗಳನ್ನು ನೀಡುತ್ತಾರೆ. ಸಂತೃಪ್ತನಾದ ರೇವಣಸಿದ್ಧನು ವರ ಬೇಡುವಂತೆ ಹೇಳಿದಾಗ ಹರಿಯುವ ಹಳ್ಳದ ನೀರು, ಕಣ್‌ಕಿಸ್‌ಜ್ವಾಳಾ, ಮನಿಗೊಂದು ರೊಟ್ಟಿ ಬೇಡಿ ಪಡೆಯುತ್ತಾರೆ.

**ಹಾಯ್ ಲಿಂಗಮ್ಮನ ವೃತ್ತಾಂತ** : ಹಾಯ್ ಲಿಂಗಮ್ಮ ತನ್ನ ಬಗೆಗೆ ಅನುಮಾನ ಪಟ್ಟ ಗಂಡ ಮತ್ತು ಮಾವನನ್ನು ರಕ್ಷಿಸಿ, ಮನೆಯಲ್ಲಿ ಜನ ಮತ್ತು ದನಗಳಿಗೆ ಕಣ್ಣು ಹೋಗಿದ್ದುದನ್ನು ಕಂಡು ಭಂಡಾರ ಹೊಡೆದು ಮತ್ತೆ ಕಣ್ಣು ಬರುವಂತೆ ಮಾಡುತ್ತಾಳೆ.

**ಗಂಗಿ ಮಾಳಮ್ಮನ ವೃತ್ತಾಂತ** : ಗಂಗಿ ಮಾಳಮ್ಮ ಮಲ್ಲಯ್ಯನನ್ನು ಮದುವೆಯಾಗಲು ಬಯಸಿ ಮೈಲಾಪುರದ ಗುಡ್ಡಕ್ಕೆ ಅವನೊಡನೆ ಬಂದು ಮದುವೆಯಾಗುತ್ತಾಳೆ. ನಾಲ್ಕು ಜನ ಅಣ್ಣಂದಿರು ಅಡ್ಡಿಪಡಿಸಿದಾಗ ಅವರಿಗೆ ಕಟ್ಟಿಗೆ ಡೋಣಿ ಹಿಡಿದು ವಗ್ಗಯ್ಯಗಳಾಗಲು ಶಾಪಕೊಡುತ್ತಾಳೆ.

**ಸಿದ್ಧರಾಮನ ವೃತ್ತಾಂತ** : ರೇವಣಸಿದ್ಧನು ಮುದ್ದುಗೌಡ- ಸುಗ್ಗಲವ್ವ ಮನೆಗೆ ಬಂದಾಗ ಅವರಿಗೆ ಮಕ್ಕಳಿಲ್ಲದ್ದರಿಂದ ಮಕ್ಕಳಿಲ್ಲದ ಮನೆಯಲ್ಲಿ ಊಟ ಮಾಡುವುದಿಲ್ಲವೆಂದು ಹಟ ಹಿಡಿದನು. ತಮಗೆ ನೀನೆ ಮಕ್ಕಳನ್ನು ಕರುಣಿಸಿಲ್ಲವೆಂದು ದಂಪತಿಗಳು ನುಡಿದಾಗ ಅವರಿಗೆ ಮಕ್ಕಳ ವರ ದಯಪಾಲಿಸಿದನು. ಸುಗ್ಗವ್ವ ಗರ್ಭಧರಿಸಿ ಮುದ್ದಾದ ಗಂಡು ಮಗುವಿಗೆ ಜನ್ಮ ನೀಡಿದಳು. ರೇವಣಸಿದ್ಧನು ಬಂದು ಸಿದ್ಧರಾಮನೆಂದು ಹೆಸರಿಟ್ಟನು. ಸಿದ್ಧರಾಮನನ್ನು ಶಾಲೆಗೆ ಕಳುಹಿಸದೆ ದನ ಕಾಯಲು ಕಳುಹಿಸಿದರು. ದನಕಾಯುವ ಹುಡುಗರ ಆಸೆಯಂತೆ ತನ್ನ ಮನೆಯ ನೆಲುವಿನ ಮೇಲಿದ್ದ ಎಳ್ಳಿನ ಗಡಿಗೆಯನ್ನು ತೂತುಮಾಡಿ ಎಲ್ಲರಿಗೂ ಎಳ್ಳು ಕೊಟ್ಟು ಮತ್ತೆ ಕಟ್ಟಿಗೆಯಿಂದ

ಮೇಣ ಹಾಕಿ ಮುಟ್ಟಿದ ಕೂಡಲೆ ಗಡಿಗೆಯ ತೂತು ಮುಚ್ಚಿ ಮೊದಲಿನಂತಾಯಿತು. ಕೆಲದಿನಗಳ ನಂತರ ಹುಡುಗರು ಸಿದ್ಧರಾಮನ ತಾಯಿಗೆ ಈ ಸಂಗತಿ ಹೇಳಲು, ಆಕೆ ಗಡಿಗೆ ತೆಗೆದು ನೋಡಿದಾಗ ಎಳ್ಳು ತುಂಬಿದ ಹಾಗೇ ಇತ್ತು.

ದನಕಾಯುವಲ್ಲಿಗೆ ಬಂದ ಮಲ್ಲಯ್ಯ ತನಗೆ ಮೊಸರನ್ನ ಬೇಕೆಂದು ಸಿದ್ಧರಾಮನನ್ನು ಕೇಳುತ್ತಾನೆ. ಸಿದ್ಧರಾಮನು ದನಕಾಯಲು ಅವನಿಗೆ ವಹಿಸಿ, ತಾನು ಮನೆಗೆ ಹಿಂತಿರುಗಿ ಬಂದು ನೋಡಿದಾಗ ಅಲ್ಲಿ ಮಲ್ಲಯ್ಯನಿರಲಿಲ್ಲ. ಆ ದಾರಿಯಾಗಿ ಬಂದ ಪರಿಸೆಯ ಜೊತೆ ಮಲ್ಲಯ್ಯನನ್ನು ಹುಡುಕುತ್ತಾ ಶ್ರೀಶೈಲಕ್ಕೆ ಬರುತ್ತಾನೆ. ಅಲ್ಲಿಯೂ ಕಾಣದೆ ಅವನನ್ನು ಕರೆಯುತ್ತಾ ಬೆಟ್ಟದಿಂದ ಕೆಳಕ್ಕೆ ಹಾರಿದಾಗ ಮಲ್ಲಯ್ಯ ಅವನನ್ನು ಎತ್ತಿಕೊಂಡನು. ಇಬ್ಬರೂ ಮೊಸರನ್ನ ಊಟ ಮಾಡಿದರು. ಅಲ್ಲಿಂದ ಮಲ್ಲಯ್ಯನನ್ನು ಸೊನ್ನಲಾಪುರಕ್ಕೆ ಕರೆತಂದು ಕುಂಬಾರ ಓಣಿಯ ಮುಂದೆ, ಬಾಳಿ ಅಗಸೆಯ ಹಿಂದೆ ಗುಡಿಕಟ್ಟಿ ಇರಿಸುತ್ತಾನೆ. ಸಿದ್ಧರಾಮನು ಕೆರೆಕಟ್ಟಿ, ಕೆರೆಯಲ್ಲಿ ಗುಡಿಯನ್ನು ಕಟ್ಟಿ ಅಲ್ಲಿಯೇ ತಾನೂ ನೆನೆಯುತ್ತಾ ಇರತೊಡಗಿದನು. "ಸಿದ್ಧರಾಮನ ಹಾಡೇನ ಇಲ್ಲಿಗ ಮುಗಿಯುತಾವೇನ" ೧ ಎನ್ನುವುದರ ಮೂಲಕ ಸಿದ್ಧರಾಮನ ಕಥೆ ಪೂರ್ಣಗೊಳ್ಳುತ್ತದೆ. ಕಾವ್ಯದ ಪ್ರತಿ ಅಧ್ಯಾಯಗಳ ಕೊನೆಯಲ್ಲಿ ಬರುವಂತೆಯೇ ಕಾವ್ಯದ ಕೊನೆಯಲ್ಲೂ ಮುಕ್ತಾಯದ ಸಾಲುಗಳು ಬಂದಿದ್ದು ಕಾವ್ಯದ ಮುಕ್ತಾಯ ಸೂಚಿಸುತ್ತದೆ.

> ದೇವಿ ಧರ್ಮರ ಹಾಡೇನ ಇಲ್ಲಿಗ ಒಂದು ಸಂದೇನ
> ಇಲ್ಲಿಗ ಒಂದು ಸಂದೇನ ಹಾಡಿದರ ಪದ ಮುಂದೇನ
> ಕಳಸವಿಟ್ಟಾರ ಕವಿತ ಕಟ್ಯಾರ ಹೊನ್ನ ಜಗ್ಗುನಿ ಗೌಡರೋ
> ದ್ಯಾವರು ಬಂದಾರ ಬನ್ನೀರೆವಿ

ಹೀಗೆ ೨೩, ೨೫೦ ಸಾಲುಗಳುಳ್ಳ ಜನಪದ ಮಹಾಕಾವ್ಯದ ಕಥಾಸ್ವರೂಪ ವಿಸ್ತೃತವಾಗಿದೆ.

---

ಅಧ್ಯಾಯ - ೪

## ಕಾವ್ಯದ ವಿಶ್ಲೇಷಣೆ

### ಅ. ಸೃಷ್ಟಿಪುರಾಣ

ಎಲ್ಲಾ ಜನಾಂಗದ ಪುರಾಣಗಳಲ್ಲಿ ತಮ್ಮದೇ ಆದ ಜನಾಂಗದ ಸೃಷ್ಟಿಗೆ ಕಾರಣವಾಗುವ ಚಿತ್ರಣ ಪ್ರಧಾನವಾಗಿ ಕಂಡು ಬರುತ್ತದೆ. ತಮ್ಮ ಜನಾಂಗದ ಸೃಷ್ಟಿಯೇ ಜಗತ್ತಿನ ಸೃಷ್ಟಿಯ ಆದಿಯಾಗಿದೆ ಎಂಬ ನೆಲೆಯಲ್ಲೇ ಅವು ನಿರೂಪಿತವಾಗುತ್ತವೆ. ಅಂತೆಯೇ ಹಾಲುಮತ ಮಹಾಕಾವ್ಯ ದಲ್ಲಿಯೂ ಕೂಡ ಇಂತಹ ಚಿತ್ರಣವನ್ನು ಕಾಣಬಹುದು.

೧. ಹಾಲುಮತ ಮಹಾಕಾವ್ಯದ ಪ್ರಾರಂಭದಲ್ಲಿ ಕೈಲಾಸದ ಹಾಡಿಕೆ ಎಂಬ ಭಾಗವು ಸೃಷ್ಟಿಗೆ ಸಂಬಂಧಿಸಿದ ಒಂದ ಸುಂದರ ಚಿತ್ರವನ್ನು ಕಟ್ಟಿಕೊಡುತ್ತದೆ. ಸುಮಾರು ಆರುನೂರು ಸಾಲುಗಳಲ್ಲಿ ನಿರೂಪಣೆಗೊಂಡಿರುವ ಸೃಷ್ಟಿಪುರಾಣವು ಅದ್ಭುತವಾಗಿಯೂ ತೋರುತ್ತದೆ.

ನೀರೆ ನೀರಂಕಾರದೊಳಗೆ ಭೂಮಿನಾರೆ ಇಲ್ಲಯ್ಯ
ಆಕಾಶ ನಿಲ್ಲೇಳಂದಾರ ಭೂಮಿನಿಲ್ಲೇಳಂದಾರ
ನೀರೆ ನೀರಂಕಾರದೊಳಗೆ ಗಾಳಿ ಮೊದಲ ಇಲ್ಲೇನ
ನೀರೆ ನೀರಂಕಾರದೊಳಗೆ ತೆರಿಗೊಳು ಮೊದಲ ಇಲ್ಲೇನ
ತೆರಿಗೋಳು ಮೊದಲ ಇಲ್ಲೇನಪ್ಪಲಿ ನೀರ ಮ್ಯಾಲೊಂದುಗುಳ್ಳೇನ
ನೀರಮಾಲೆ ಗುಳ್ಳೆನಪ್ಪಲಿ ಚೆಂಡ ಮೊದಲ ಆದವ
ಚೆಂಡ ಮೊದಲ ಆದವಪ್ಪಲಿ ದಂಡ ಹಿಂದ ಆದವ [೧]



ಹೀಗೆ ಸಾಗುತ್ತಾ ನಮ್ಮ ಕಣ್ಣೆಗೆ ಸೃಷ್ಟಿಯ ಸ್ಪಷ್ಟ ಚಿತ್ರಣ ಕಟ್ಟಿಕೊಡುವಲ್ಲಿ ಯಶಸ್ವಿಯಾಗಿದೆ. ಆದಿಯಲ್ಲಿ ನಿರಾಕಾರವೂ, ನಿಶ್ಚಲವೂ ಆದ ನೀರು ಮಾತ್ರ ಇದ್ದು, ನಂತರದಲ್ಲಿ ಗುಳ್ಳೆಯೊಂದು ಎದ್ದು ರುಂಡ, ಮುಂಡ, ಕೈಕಾಲು ರೂಪ ಪಡೆದು ಅದರೊಳಗೆ ಮುನ್ನೂರ ಅರವತ್ತು ನರಗಳು ಉಂಟಾಗಿ ಅಖಂಡೇಶ್ವರ ನಿರ್ಮಾಣಗೊಳ್ಳುತ್ತಾನೆ. ಶಬ್ದ, ನಾದಗಳು ಹುಟ್ಟುತ್ತವೆ. ನಾದದಿಂದಾಗಿ ಐವತ್ತೆರಡು ಅಕ್ಷರಗಳು ಹುಟ್ಟುತ್ತವೆ.

ಐವತ್ತೆರಡು ಅಕ್ಷರದಿಂದ ಮಾತು ಮಂತರ ನಡದಾವ
ಮಾತು ಮಂತರ ನಡೆದಾವಪ್ಪಲಿ ವಿದ್ಯಾ ಬುದ್ಧಿ ನಡೆದಾವ [೨]

---

೧. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೨, ಸಾಲು - ೧೫ - ೨೧
೨. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೩, ಸಾಲು - ೯- ೧೦

ಎರಡು ಯುಗ ಹೀಗೆ ಕಳೆದ ಮೇಲೆ ಮೂರನೆ ಯುಗದಲ್ಲಿ ಅಖಂಡೇಶ್ವರನು ತನ್ನ ಎಡಕಿನ ಫಕಡಿಯ ಮೂರು ಮೂಳೆಗಳನ್ನು ಮರಿದು ಅವುಗಳಿಗೆ ಮಂತ್ರ ಹಾಕಿದಾಗ ಆದಿಶಕ್ತಿ ಸೃಷ್ಟಿಯಾಗುತ್ತಾಳೆ.

ಆದಿಯ ಶಕ್ತಿ ಪುಟಿದಾಳಪ್ಪಲ್ಲಿ ನಾರಿನಾಗಿ ನಿಂತಾಳ
ನಾರಿನಾಗಿ ನಿಂತಾಳಪ್ಪಲ್ಲಿ ಹೆಣ್ಣಗೊಂಬಿನಾದಳ
ಹೆಣ್ಣು ಮಗಳ ಮವ್ವದ ಗೊಂಬಿ ನಾರಿನಾಗಿ ನಿಂತಾಳ
ನಾರಿನಾಗಿ ನಿಂತಾಳಪ್ಪಲ್ಲಿ ಖಾನ ಖೂನ ನಡದಾವ
ಕಾಮ ಕ್ರೋಧ ನಡದಾವಪ್ಪಲ್ಲಿ ಮೋಹ ಮಶ್ಚರ ನಡದಾವ
ನಾರಿನಾಗಿ ನಿಂತಾಳಪ್ಪಲ್ಲಿ ಮಡದೀಯನಾಗಿ ಬಂದಾಳ
ಮಡದೀಯನಾಗಿ ಕುಂದ್ರುತಾಳೇನ ಎಡಕೆ ಕುಂದ್ರತಾಳೇನ
ಖಾನ ಖೂನ ನಡೆದಾವಪ್ಪಲ್ಲಿ ಮೋಹ ಮಶ್ಚರ ಮಡೆದಾವ
ಮೋಹ ಮಶ್ಚರ ಮಡದಾವಪ್ಪಲ್ಲಿ ಬೀಜವಾಗಿ ನಿಂದ್ರುತಾವೇನ
ಪುಟದ ಬೀಳತಾವೇನಪ್ಪಲ್ಲಿ ಆದಿಯ ಶಕ್ತಿ ಒಳಗೇನ
ಆದಿಯ ಶಕ್ತಿ ಅಲ್ಲೇನಪ್ಪಲ್ಲಿ ಗರ್ಭಿಣಿ ಆಗುತಾಳೇನ
ಗರ್ಭಿಣಿ ಆಗುತಾಳೇನಪ್ಪಲ್ಲಿ ಒಂದಕ ಎರಡು ನಡೆದಾವ
ಒಂದಕ್ಕ ಎರಡು ನಡದಾವಪ್ಪ ರಕ್ಕಸರು ಹುಟ್ಟುತಾರೇನ
ರಕ್ಕಸರು ಹುಟ್ಟುವ ಯಾಳೇನಪ್ಪಲ್ಲಿ ಮೂರ ಯುಗಗೋಳು ಆದವ [1]

ಆದಿಶಕ್ತಿಯು ಅಖಂಡೇಶ್ವರನ ಮಡದಿಯಾಗಿ ರಾಕ್ಷಸರಿಗೆ ಜನ್ಮ ನೀಡುವಲ್ಲಿಗೆ ಮೂರು ಯುಗಗಳು ಕಳೆಯುತ್ತವೆ. ಭೂಮಿ ಮತ್ತು ಆಕಾಶ ಇಲ್ಲದೆ ಅಂಧಕಾರವೇ ತುಂಬಿರುವಲ್ಲಿ ಗಾಳಿದೇವ ಹುಟ್ಟಿ ಗಾಳಿ ಬೀಸತೊಡಗುತ್ತದೆ.

ಗಾಳಿದೇವ ಹುಟ್ಯಾನಪ್ಪಲ್ಲಿ ಥೆರಿಗೋಳು ಸುರುವನಾದಾವ
ನೀರಿನ ಥೆರಿಗೋಳು ಆದವಪ್ಪಲ್ಲಿ ಗಾಳಿ ಮೊದಲ ಬಂದಾವ
ಗಾಳಿ ಬಂದ ಮ್ಯಾಲೇನಪ್ಪಲ್ಲಿ ನಿರ್ಮೂಲ ಬೀಜನಾದವ

---

೧. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೪, ಸಾಲು - ೯- ೨೩

ಅಂಡಾಂಡ ಪಿಂಡಾಂಡಲ್ಲೆನಪ್ಪಲ್ಲಿ ಅಂಡ ಇಪ್ಪತ್ತೊಂದೇನ
ಪಿಂಡಾಂಡ ಇಪ್ಪತ್ತೊಂದು ಲಕ್ಷೇನಪ್ಪ ಅಂಡ ಇಪ್ಪತ್ತೊಂದೇನ
ನೀರವಳಗೆ ಇರುವದಪ್ಪಲ್ಲಿ ನೀರಿನೊಳಗನಿದ್ದಾವ
ನೀರಿನೊಳಗನಲ್ಲೇಳ ನಿರ್ಮೂಲ ಬೀಜನಿದ್ದಾವ
ಮುಂದಿನ ಇಪ್ಪತ್ತೊಂದು ಲಕ್ಷ ವರ್ಷ ತಯ್ಯಾರಾಗುತ್ತಾವೇನ
ಜಲಜ ಇಪ್ಪತ್ತೊಂದು ಲಕ್ಷ ವರ್ಷ ತಯ್ಯಾರಾಗುತ್ತಾವೇನ
ಅಂಡ ಇಪ್ಪತ್ತೊಂಡು ಲಕ್ಷ ವರ್ಷ ತಯ್ಯಾರಾಗುತ್ತಾವೇನ
ನೀರೊಳಗೆ ನಿರ್ಮೂಲ ಬೀಜ ಇದ್ದು ಇಲ್ಲದಂಗ ಇದ್ದಾವ [೧]

ಹೀಗೆ ಇದ್ದ ಸ್ಥಿತಿಯಲ್ಲಿ ಶಂಖದೊಳಗೆ ಬಸವಣ್ಣ ಹುಟ್ಟಿ ಬಂದು ನೀರಿಗೆ ಹೆಪ್ಪುಕೊಟ್ಟು ಮತ್ತೆ ಶಂಖದಲ್ಲಿ ಕೂರುತ್ತಾನೆ. ಕೌಡಿಯಲ್ಲಿ ಹುಟ್ಟಿದ ಎಲ್ಲಮ್ಮ ತಾಯಿ ಧುಂದಕಾರದಲ್ಲಿ ಧುನಿಯಾ ಹಿಡಿಯುತ್ತಾಳೆ. ಹೀಗೆ ಮೂರನೆ ಯುಗ ಕಳೆದು ನಡೆದ ಘಟನಾವಳಿಯಲ್ಲಿ ಸೂರ್ಯ, ಚಂದ್ರರು ಹುಟ್ಟಿ ಹಗಲು ಮತ್ತು ರಾತ್ರಿ ಉಂಟಾಗುತ್ತವೆ. ನಾಲ್ಕನೆಯ ಯುಗದಲ್ಲಿ ಕತ್ತಲು ಕಳೆದುದರಿಂದ ಐದನೆ ಯುಗದಲ್ಲಿ ಏಳು ವಾರಗಳು, ತಾಸು, ಗಳಿಗೆ, ತಿಥಿ, ಅಮಾವಾಸ್ಯೆ, ಹುಣ್ಣಿಮೆ ಉಂಟಾಗುತ್ತವೆ. ಮುಂದೆ ನೀರಿನೊಳಗಿನ ನಿರ್ಮೂಲ ಬೀಜದಿಂದಾಗಿ ೨೧ ಲಕ್ಷ ಜಲಚರಗಳು ಹುಟ್ಟುತ್ತವೆ. ನಂತರ ಬ್ರಹ್ಮಾದಿಗಳು ಹುಟ್ಟಿದ ಚಿತ್ರಣ ಹೀಗೆ ಬರುತ್ತದೆ.

ಬ್ರಹ್ಮ ಹುಟ್ಟುತಾನೇನ ವಿಷ್ಣು ಬರುವುತಾನೇನ
ರುದ್ಧರ ಬರುವುತಾನೇನ ಮಹೇಶ್ವರ ಬರುವುತಾನೇನ
ದಕ್ಷ ಬ್ರಹ್ಮ ಬಂದಾನೆ ಮಹಾದೇವ ಬರುವುತಾನೇನ
ಐದು ಮಂದಿನಲ್ಲೇಳ ತಯ್ಯಾರಾಗುತ್ತಾರೇನ
ಧುಂದಕಾರದೊಳಗೇನ ಧುನಿಯಾ ಹಿಡಿಯುತಾರೇನ
ಶಾಂತಮುತ್ಯಾನಲ್ಲೇಳ ತಯ್ಯಾರಾಗುತಾರೇನ [೨]

ಬ್ರಹ್ಮ ವಿಷ್ಣು, ರುದ್ರ, ಮಹೇಶ್ವರ, ಮಹಾದೇವರು ಜನ್ಮತಾಳಿದಂತೆ ಶಾಂತಮುತ್ಯಾ ಕೂಡ ಹುಟ್ಟುತ್ತಾನೆ. ಈತನೇ ಕುರುಬ ಜನಾಂಗದ ಮೂಲ ಪುರುಷ ಎನಿಸಿಕೊಳ್ಳುತ್ತಾನೆ.

---

೧. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೫, ಸಾಲು - ೭-೧೭
೨. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೬-೭, ಸಾಲು - ೨೯-೩೧, ೧-೩

ಈ ಕಾವ್ಯದಲ್ಲಿ ನಿರೂಪಿತವಾಗಿರುವ ಸೃಷ್ಟಿ ಸಂಬಂಧ ಚಿತ್ರಣವು ದ್ವೈತ ಪುರಾಣಗಳನ್ನು ಹೋಲುತ್ತದೆಯೆಂದು ಹೇಳುವ ಡಾ|| ಸಿ.ಎನ್. ರಾಮಚಂದ್ರನ್‌ರವರು "ಈ ವರ್ಗದ ಪುರಾಣಗಳು ಸೃಷ್ಟಿ ಪೂರ್ವ ಜಡದ್ರವ್ಯದ ಅಸ್ತಿತ್ವವನ್ನು ಗೃಹೀತವಾಗಿರಿಸಿಕೊಂಡು, ಅನಂತರ ಆ ಜಡದ್ರವ್ಯದಿಂದ ಸೃಷ್ಟಿಕರ್ತನು ಸಮಸ್ತ ಜಗತ್ತನ್ನು ಸೃಷ್ಟಿಸುತ್ತಾನೆಂದು ದರ್ಶಿಸುತ್ತವೆ" [೧] ಎಂದು ಅಭಿಪ್ರಾಯ ಪಡುತ್ತಾರೆ.

ಹಾಲುಮತ ಮಹಾಕಾವ್ಯದಲ್ಲಿ ಬರುವ ಸೃಷ್ಟಿ ಪುರಾಣವು ಬೆಬಿಲೋನಿಯಾದ ಅತ್ಯಂತ ಪ್ರಾಚೀನ ಪುರಾಣವಾದ ಎನುಮ ಎಲಿಷ್‌ನಲ್ಲಿ ಹೇಳಿರುವ ಸೃಷ್ಟಿ ಪರಿಕಲ್ಪನೆಗೆ ಸಮಾನವೆನಿಸುತ್ತದೆ. ಅದರ ವಿವರ ಹೀಗಿದೆ -

"ಆದಿಯಲ್ಲಿ ಕೇವಲ ನೀರಿನ ರಾಶಿಯಿದ್ದಿತು. ಆ ರಾಶಿಯಲ್ಲಿ ಸಿಹಿ ನೀರಿನೊಡನೆ ಉಪ್ಪುನೀರು ಬೆರೆಯಿತು. ಸಿಹಿ ನೀರಿನ ಹೆಸರು ಅಪ್ಪ(ಪುರುಷ) ಮತ್ತು ಉಪ್ಪು ನೀರಿನ ಹೆಸರು ತಿಯಾಮತ್ (ಸ್ತ್ರೀ). ಕೆಲ ಕಾಲಾನಂತರ ನಡೆದ ಹಿರಿಯ ಮತ್ತು ಕಿರಿಯ ದೇವತೆಗಳ ಯುದ್ಧದಲ್ಲಿ ಗುಡುಗು-ಮಿಂಚುಗಳ ದೇವನಾದ ಮಾರ್ಡುಕ್ ಎಂಬ ತರುಣನ ನಾಯಕತ್ವದಲ್ಲಿ ಕಿರಿಯ ದೇವತೆಗಳು ಸಂಪೂರ್ಣ ವಿಜಯವನ್ನು ಪಡೆದರು. ರಾಕ್ಷಸಾಕೃತಿಯ ಸರ್ಪದ ರೂಪಿನಲ್ಲಿದ್ದ ತಿಯಾಮತ್‌ಳನ್ನು ಮಾರ್ಡುಕ್ ಕೊಂದು, ಅವಳ ದೇಹವನ್ನು ಎರಡು ಭಾಗಗಳಾಗಿ ಸೀಳಿ, ಅವುಗಳಿಂದ ಆಕಾಶ ಮತ್ತು ಭೂಮಿಗಳನ್ನು ಸೃಷ್ಟಿಸಿದನು. ಅನಂತರ ಸೂರ್ಯ-ಚಂದ್ರ-ನಕ್ಷತ್ರಗಳು, ವಿವಿಧ ಜೀವಿಗಳು ಮತ್ತು ಕೊನೆಗೆ ಮಾನವ ಸೃಷ್ಟಿಯಾಯಿತು". ೨

ಬೈಬಲಿನಲ್ಲಿ ಬರುವ ಪ್ರಥಮ ಪುರುಷ ಆಡಂನ ಪಕ್ಕೆಯ ಎಲುಬಿನಿಂದ ಈವಳನ್ನು ಸೃಷ್ಟಿ ಮಾಡಿದಂತೆ ಅಖಂಡೇಶ್ವರ ತನ್ನ ಎಡಕಿನ ಪಕ್ಕೆಲುಬಿನ ಮೂಳೆಗಳಿಂದ ಆದಿಶಕ್ತಿಯನ್ನು ನಿರ್ಮಾಣ ಮಾಡಿದುದು ಕಂಡು ಬರುತ್ತದೆ. ಶಾಂತಮುತ್ಯಾ ಐದು ಮಂದಿ ರಾಕ್ಷಸರನ್ನು ಕೊಂದು ಕುರಿಗಳನ್ನು ಸೃಷ್ಟಿಸಿದ್ದು, ಡುಳ್ಳಾಸುರನನ್ನು ಕೊಂದು ಕಂಬಳಿಯನ್ನು ನೇಯ್ಗೆ ಮಾಡಲು ಬೇಕಾದ ಸಾಮಾಗ್ರಿಗಳನ್ನು ತಯಾರಿಸಿಕೊಂಡದ್ದು ಕರುಬ ಜನಾಂಗ ಅಸ್ತಿತ್ವ ಪಡೆದುಕೊಂಡ ಹಿನ್ನೆಲೆಯಿಂದಾಗಿ ಪಡೆದುಕೊಂಡುದಾಗಿದೆ. "ಈ ಬಗೆಯ ಸೃಷ್ಟಿ ಪುರಾಣಗಳಲ್ಲಿ ನಾವು ಗಮನಿಸಬೇಕಾದ ಅನೇಕ ಅಂಶಗಳಿವೆ: ಇಡೀ ವಿಶ್ವ ಸೃಷ್ಟಿಯಿಂದ ಪ್ರಾರಂಭಿಸಿ, ಈ ಸೃಷ್ಟಿ

---

೧. ಡಾ. ಸಿ.ಎನ್. ರಾಮಚಂದ್ರನ್, ಹೊಸ ಮಡಿಯ ಮೇಲೆ ಚದುರಂಗ, ೨೦೦೭ ಪುಟ : ೧೩೪,
೨. ಡಾ. ಸಿ.ಎನ್. ರಾಮಚಂದ್ರನ್, ಹೊಸ ಮಡಿಯ ಮೇಲೆ ಚದುರಂಗ, ೨೦೦೭ ಪುಟ : ೧೩೪.

ಪುರಾಣಗಳು ಒಂದು ಜನಾಂಗದ ಸಮುದಾಯದ ಸೃಷ್ಟಿಯಿಂದ ಮುಗಿಯುತ್ತವೆ. ಹಾಲುಮತ ಕುರುಬ ಜನಾಂಗದ ಮಹಾಕಾವ್ಯವಾದುದರಿಂದ ಆ ಜನಾಂಗದ ಆದಿ ಪುರುಷರು ಮತ್ತು ಧಾರ್ಮಿಕ ನಾಯಕರ ಜನ್ಮದೊಡನೆ ಈ ಸೃಷ್ಟಿ ಪುರಾಣ ಕೊನೆಯಾಗುತ್ತದೆ". [೧]

೨. ಮುಂದೆ ಪಾರ್ವತಿ ಕುರಿಗಳನ್ನು ಕಾಯುತ್ತಾ ಬೇಸರವಾಗಿ ಸ್ವರ್ಗದಿಂದ ಭೂಮಿಗೆ ಬಂದು, ಕುರಿಗಳನ್ನು ಹುತ್ತದಲ್ಲಿ ಹೋಗಿಸಿ, ಅದರ ಬಾಯಿ ಮುಚ್ಚಿ, ಹುತ್ತದ ಗಡ್ಡಿಗೆ ಮುತ್ತಲ ಮರವನ್ನು ನೆಡುತ್ತಾಳೆ. ಅನಂತರ ತಾನು ಸ್ನಾನ ಮಾಡಿ ಜೀವ ಸೃಷ್ಟಿಗೆ ಮುಂದಾಗುತ್ತಾಳೆ. ಕಾವ್ಯದಲ್ಲಿ ಆ ಸಂದರ್ಭ ಹೀಗೆ ಚಿತ್ರಣಗೊಂಡಿದೆ.

ಹಾಕಿದ ಕಚ್ಚಿ ಬಿಚ್ಯಾಳೆ ಟೊಂಕಿನ ಸೆರಗ ಬಿಚ್ಯಾಳೆ
ಮುತ್ತಿನ ಸೆರಗ ಹೊಚ್ಯಾಲೆ ಭೂಮಿಯ ಮ್ಯಾಲೆ ಕುಂತಾಳ
ಎದಿ ಮ್ಯಾಲ ಕೈಯ ವಗದಾಳೆ ಮಲಿಯಾ ತೊಳಿಯುತಾಳೇನ
ಎಡಕಿನ ಮಲಿಯ ಮ್ಯಾಲೆನ ಬಲಗ್ಯೆ ತಿರುವುತಾಳೇನ
ಎಡಗ್ಯೆಯಲ್ಲಿನಲ್ಲೇಳ ಮಣ್ಣ ಹಿಡಿಯುತಾಳೇನ
ಬಲಗ್ಯೆಲಿ ಹಾಲ ಹಿಂಡ್ಯಾಳೆ ಎಡಗ್ಯೆವಳಗ ಮಣ್ಣೇನ
ಎಡಗ್ಯೆವಳಗ ಮಣ್ಣೇನ ಮುದ್ದಿಮಾಡುತಾಳೇನ
ಎಡಗ್ಯೆ ವೈಯುತಾಳೇನ ಬಲಕಿನ ಮಲಿಯಾ ತಿರುವ್ಯಾಳ
ಬಲಗ್ಯೆಯ ಮಣ್ಣ ಹಿಡಿದಾಳೆ ಬಲಕಿನ ಹಾಲ ಹಿಂಡ್ಯಾಳ
ಎಡಗ್ಯೆಯ್ಲಿ ಮಲಿಯಾ ಹಿಡಿದಾಳೆ ಮಣ್ಣಿನ ಮ್ಯಾಲ ಹಿಂಡ್ಯಾಳ
ಎಡಕೊಂದು ಗೊಂಬಿ ಮಾಡ್ಯಾಳೆ ಬಲಕೊಂದು ಗೊಂಬಿ ಮಾಡ್ಯಾಳ [೨]

ಹೀಗೇ ಎಡಗ್ಯೆ ಮಣ್ಣಿನಿಂದ ಹೆಣ್ಣು ಗೊಂಬೆಯನ್ನೂ, ಬಲಗ್ಯೆ ಮಣ್ಣಿನಿಂದ ಗಂಡು ಗೊಂಬೆಯನ್ನೂ ಸೃಷ್ಟಿಸಿ, ಅವುಗಳಿಗೆ ಶಿವನಿಂದ ಮಂತ್ರ ಹಾಕಿಸಿ ಜೀವ ತುಂಬಿಸುತ್ತಾಳೆ. ಅನಂತರ ಶಿವನಿಂದ ಅವುಗಳಿಗೆ ಹೆಸರಿಡಿಸುತ್ತಾಳೆ.

ಬಾರೋ ಬಾರೋ ಮಹಾದೇವ ಹೆಸರ ಏನಂತ ಕರದಾನ
ಏನಂತ ಇಡುವಲಿ ಬೇಕಯ್ಯ ಏನೇನು ಕರಿಯಲಿ ಬೇಕಯ್ಯ

---

೧. ಡಾ. ಸಿ.ಎನ್. ರಾಮಚಂದ್ರನ್, ಹೊಸ ಮಡಿಯ ಮೇಲೆ ಚದುರಂಗ, ೨೦೦೭ ಪುಟ : ೧೩೭,
೨. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೧೧,೧೨,
ಸಾಲು - ೨೫-೩೨, ೧-೩

ಹಾಲುಮತವನಂತಪ್ಪ ಹೆಸರ ಕರೆಯುತಾರೇನ

ಹಾಲ ತಾಯಿಗಂದಾನೆ ಮತವ ಶಿವರಾಯಿಗಂದಾನ

ಮತವನಂದರ ಮಂತರ ಹಾಲನಂದರ ಮಣ್ಣೇನ

ತಾಯಿಯ ಮಲಿಯ ಹಾಲೇನೆ ತಂದಿಯ ಮಂತರಾದವ

ಹಾಲುಮತವನಲ್ಲೇಳ ಹೆಸರ ಇಡುವುತಾರೇನ [೧]

ಜೀವ ಪಡೆದ ಹಾಲು ಮತದ ಹೆಣ್ಣು-ಗಂಡುಗಳಿಗೆ ಮುದ್ದವ್ವ-ಮುದಗೊಂಡ ಎಂದು ಕರೆಯುತ್ತಾರೆ. ಇವರು ದಂಪತಿಗಳಾಗಿ, ಆದಿಗೊಂಡ, ಅನಂತಗೊಂಡ, ಸಿದ್ದಗೊಂಡ, ಪದುಮಗೊಂಡ ಎಂಬ ನಾಲ್ಕು ಮಂದಿ ಮಕ್ಕಳನ್ನು ಪಡೆಯುತ್ತಾರೆ. ಆ ಮಕ್ಕಳಿಗೆ ಮದುವೆಯಾಗಿ, ಆದಿಗೊಂಡನಿಗೆ ಅರವತ್ತು ಮಕ್ಕಳು, ಅನಂತಗೊಂಡನಿಗೆ ಮೂವತ್ತ ಮಕ್ಕಳು, ಸಿದ್ದಗೊಂಡನಿಗೆ ಇಪ್ಪತ್ತು ಮಕ್ಕಳು ಮತ್ತು ಪದುಮಗೊಂಡನಿಗೆ ನಾಲ್ಕು ಮಕ್ಕಳು ಹುಟ್ಟಿ ಹಾಲು ಮತದ ಸಂತತಿ ಬೆಳೆಯುತ್ತದೆ.

೩. ತಿಪರೇಸೂರನ ಏಳನೆಯ ಕಿರಿಯ ಮಗಳು ಕಮಳಾದೇವಿಗೆ ಆಗ ಬಿತ್ತಿ ಆಗಲೇ ಬೆಳೆವ ಗಿಡದ ಬೀಜವನ್ನು ಊರಿ, ಬೆಳೆದ ಗಿಡದೊಡನೆ ಶಿವನ ಸೂಚನೆಯಂತೆ ಮದುವೆ ಮಾಡಲಾಗುತ್ತದೆ. ಆಗ ಮಿಂಚು ಹೊಡೆದಂತಾಗಿ ಶಿವಲೀಲೆಯಿಂದ ಕಮಳಾದೇವಿ ಗರ್ಭಿಣಿಯಾಗಿ ಮಗುವಿಗೆ ಜನ್ಮ ನೀಡುತ್ತಾಳೆ. ಈ ಮಗುವನ್ನು ಶಿವನು ಜಂಬೂದ್ವೀಪದ ನಡುಗಡ್ಡೆಯಲ್ಲಿನ ಕಮಲದ ಹೂವಿನ ಒಳಗೆ ಇಡುತ್ತಾನೆ. ಕಾಳಿನಾರಾಯಣನು ಶಿವನ ಬಯಕೆಯಂತೆ ಪೂಜಿಸಲು ಜಂಬೂದ್ವೀಪದ ಹೂವಿನೊಡನೆ ತಂದ ಕಮಲವು ಸೂರ್ಯ ಉದಯಿಸಿದಾಗ ಬಾಯಿ ತೆಗೆದು ಅದರಲ್ಲಿನ ಶಿಶು ಗೋಚರವಾಗುತ್ತದೆ. ಈ ಶಿಶುವನ್ನು ಶಿವನು ಪಾರ್ವತಿಗೆ ನೀಡುತ್ತಾನೆ. ಈ ಶಿಶುವೆ ಬಾಳಭರಮದೇವರು. ಹೀಗೆ ಕಾವ್ಯವು ಬಾಳಭರಮದೇವರ ಹುಟ್ಟನ್ನು ತಿಳಿಸುತ್ತದೆ.

೪. ಅಮೋಗಿಸಿದ್ಧನ ಸೃಷ್ಟಿಯ ಕಥೆ ಹೀಗಿದೆ - ಶಿವನು ಕಮಳಾದೇವಿಯೊಡನೆ ಕದ್ದು ಮಾಡಿದ ಹಾದರವನ್ನು ಗೆದ್ದು ತರಲು ಕೊರವಂಜಿ ವೇಷದಲ್ಲಿ ಹೊರಟ ಪಾರ್ವತಿ ತಿಪರೇಸೂರನ ಅರಮನೆ ಮುಂದೆ ನಿಲ್ಲುತ್ತಾಳೆ. ಕಮಳಾದೇವಿಗೆ ಮಗುವಾದುದು ರಾಜನಿಗೆ ತಿಳಿದರೆ ತಮ್ಮನ್ನು ಶಿಕ್ಷಿಸುವನೆಂದು ಹೆದರಿದ ದಾಸಿಯರು ಕೊರವಂಜಿಯ ಬುಟ್ಟಿಯಲ್ಲಿ ಆಗತಾನೆ ಹುಟ್ಟಿದ ಶಿಶುವನ್ನು ಹಾಕಿಬಿಡುತ್ತಾರೆ. ಪಾರ್ವತಿ ಬುಟ್ಟಿಯನ್ನು ಹೊತ್ತು ಬಂದು ಬ್ರಹ್ಮ ವಿಷ್ಣುವಿಗೆ ಈ ಸುದ್ದಿ ತಿಳಿಸಲು

---

೧. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೧೩, ಸಾಲು - ೮-೧೪

ಯೋಚಿಸುತ್ತಾಳೆ. ಆದರೆ ಶಿವನು ಹದ್ದಾಗಿ ಬಂದು ಬುಟ್ಟಿಯನ್ನು ಹೊತ್ತುಬರುವಾಗಲೇ ಅದರಿಂದ ಮಗುವನ್ನು ಒಯ್ದು ಜಂಬೂದ್ವೀಪದ ಗಡ್ಡೆಯಲ್ಲಿನ ತಾವರೆ ಹೂವುನಲ್ಲಿ ಮುಚ್ಚಿಡುತ್ತಾನೆ. ಬ್ರಹ್ಮ ವಿಷ್ಣುಗಳ ಮುಂದೆ ಕಾಣದೆ ಬುಟ್ಟಿ ಇಳಿಸಿ ತೋರಲು ಹೋದ ಪಾರ್ವತಿ ಅಲ್ಲಿ ಮಗು ಕಾಣದೆ ಬೆವರುತ್ತಾಳೆ. ಬೆವರಿನಿಂದ ಒದ್ದೆಯಾದ ತನ್ನ ಮೈಯ ಮಣ್ಣನ್ನು ತೀಡಿ ಅದರಿಂದ ಗೊಂಬೆ ಮಾಡುತ್ತಾಳೆ.

ತನ್ನ ಮೈಯ ಬೇವರೇನ ತಾನೆ ಸವರಿ ತಗದಾಳ
ಸೆಳ್ಳಿ ಸೆಳ್ಳಿ ಮಣ್ಣೇನ ತಾನೇ ಕುತ್ತಿತಾಳೇನ
ಗೊಂಬಿ ಮಾಡುತಾಳೇನೆ ಕೈಯಾಗ ಹಿಡಕೊಂಡು ಕುಂತಾಳ
ಮುಕ್ಕಣ್ಣ ಶಿವರಾಯನ ತಾನೇ ಕರಿಯುತಾಳೇನ
ಬಾರೋ ಬಾರೋ ಶಿವರಾಯ ನಂದೊಂದ ಮಾತ ಕೇಳಯ್ಯ
ಉಪ್ಪ ಉಂಡ ಖಾಯಕ ಮಣ್ಣಗೊಂಬಿ ಮಾಡೇನ
ಮಣ್ಣಗೊಂಬಿ ಮಾಡೇನೆ ಮಂತರ ಮಾಡಬೇಕಂದಾಳ
ಮಂತರ ಮಾಡಜಬೇಕಂದಾಳ ಪಿಂಡಾಂಡ ಮಾಡಬೇಕಂದಾಳ
ಪಿಂಡಾಂಡ ಮ್ಯಾಲೆ ನಿಂದೇನ ಹಂಬಲ ಬಹಳೇಳು ಅಂದಾಳ [೧]

ಪಾರ್ವತಿ ತಾನು ಮಾಡಿದ ಬೊಂಬೆಗೆ ಶಿವನಿಂದ ಮಂತ್ರ ಹಾಕಿಸಿ ಜೀವ ತುಂಬಿಸುತ್ತಾಳೆ. ಈ ಗಂಡು ಮಗುವಿಗೆ ಅಮೋಗಿಸಿದ್ಧನೆಂದು ಹೆಸರಿಡುತ್ತಾರೆ. ಸೃಷ್ಟಿಕಾರ್ಯ ಕಾವ್ಯದಲ್ಲಿ ಮುಂದುವರಿಯುತ್ತದೆ. ಬೆವರಿನಿಂದ ಒದ್ದೆಯಾದ ಮಣ್ಣನ್ನು ಪಾರ್ವತಿ ಜೀವ ಸೃಷ್ಟಿಗಾಗಿ ಬಳಸುತ್ತಾಳೆ. ಹಸಿಮಣ್ಣು ಜೀವ ಸೃಷ್ಟಿಯ ಸಂಕೇತವಾಗಿ ಕಾವ್ಯದಲ್ಲಿ ಕಾಣಿಸಿಕೊಂಡಿದೆ.

೫. ಬಾಳಭರಮದೇವರು ಮತ್ತು ಸೂರಮ್ಮದೇವಿಗೆ ಶಿವನೆ ಅವತಾರಗೊಂಡು ಹುಟ್ಟಿದ ಮಗುವೇ ಬೀರಪ್ಪ, ಇವನು ಹುಟ್ಟಿದ ಹದಿಮೂರನೆ ದಿನಕ್ಕೆ ಕಾಡಿಗೆ ಒಯ್ದು ಬಿಡಬೇಕೆಂದು ಶಿವನು ಹೇಳುತ್ತಾನೆ. ಅದರಂತೆ ಬೀರಪ್ಪ ಹುಟ್ಟಿದ ಹದಿಮೂರನೇ ದಿನಕ್ಕೆ ಸೂರಮ್ಮದೇವಿಯು ತನ್ನ ಅಣ್ಣ ಕಳುಹಿಸಿದ ಬಲಶಾಲಿ ಆಳುಗಳಿಂದ ಕಾಡಿಗೆ ತೊಟ್ಟಿಲನ್ನು ಸಾಗಿಸುತ್ತಾಳೆ. ಆದರೆ ಅಣ್ಣ ಕಾಳಿನಾರಾಯಣ ಮಗುವನ್ನು ಕೊಲ್ಲಲು ತನ್ನ ಆಳುಗಳಿಗೆ ತಿಳಿಸಿರುತ್ತಾನೆ. ಆಳುಗಳು

---

೧. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೭೩, ಸಾಲು - ೨೩-೩೨

ಮಗುವನ್ನು ಕೊಲ್ಲದೆ ಕೊದಲಗಿ ನಂದನ ಬನದಲ್ಲಿನ ಒಣಗಿದ ಆಲದ ಮರದ ಕೊಂಬೆಗೆ ತೊಟ್ಟಿಲನ್ನು ಕಟ್ಟಿ, ಬಿಸಿಲಿನ ತಾಪಕ್ಕೆ ಮಗು ಸಾಯುತ್ತದೆಂದು ಭಾವಿಸಿ ಹೊರಡುತ್ತಾರೆ. ಹೋಗುವಾಗ ರಕ್ತಹೊನ್ನಿಗಿಡ ಕಡಿದು ಅದರ ಬೊಡ್ಡೆಯಿಂದ ಕೂಸಿನ ಆಕಾರ ಮಾಡಿ, ಅದರ ಕುತ್ತಿಗೆ ಕತ್ತರಿಸಿ ಕಾಳಿನಾರಾಯಣನಿಗೆ ತೋರಿಸಿ ಮಗುವನ್ನು ಕೊಂದುದಾಗಿ ಹೇಳುತ್ತಾರೆ. ಶಿವ ಪಾರ್ವತಿಯರು ಆಕಾಶ ಮಾರ್ಗದಲ್ಲಿ ಬರುವಾಗ ಮಗುವಿನ ಅಳುವ ಧ್ವನಿ ಕೇಳಿ ಅಂಚಿನ ಆಲದ ಮರದ ಬಳಿಗೆ ಬರುತ್ತಾರೆ. ಆ ಮಗುವಿನ ಸೌಂದರ್ಯ ಕಂಡು ಪಾರ್ವತಿ ಬೆವರುತ್ತಾಳೆ. ಪಾರ್ವತಿ ತನ್ನ ಬೆವರಿನಿಂದ ಮೈಯ ಮಣ್ಣನ್ನು ಉಜ್ಜಿ ತೆಗೆದು ಹುಳುಗಳನ್ನು ಮಾಡಿ ಶಿವನಿಂದ ಮಂತ್ರ ಹಾಕಿಸಿ ಜೇನು ಹುಳುಗಳನ್ನು ಸೃಷ್ಟಿಸುತ್ತಾಳೆ.

ಪಾರ್ವತಿ ಮೈಯ ಬೆವರೇನ ಮಾದೇವನ ಮಂತರಾದವ
ಮಣ್ಣಿನ ಹುಳಗೋಳು ಆದಾವೆ ಮಾದೇವನ ಮಂತರಾದವ
ಜೇನು ಹುಳುಗಳು ತಯ್ಯಾರ ಬೀರಣ್ಣದೇವರಿಗೆ ಮಾಡ್ಯಾರ
ಬೀರಣ್ಣದೇವರಿಗಲ್ಲೇಳ ಸಂರಕ್ಷಣಾ ಆಗುತಾವೇನ [೧]

ಹೀಗೆ ಪಾರ್ವತಿಯ ಬೆವರಿನ ಮಣ್ಣಿನಿಂದ ಸೃಷ್ಟಿಗೊಂಡ ಜೇನು ಹುಳುಗಳು ಲಿಂಗ ಬೀರಣ್ಣನ ರಕ್ಷಣೆಗಾಗಿ ನಿಲ್ಲುವಂತೆ ಶಿವ-ಪಾರ್ವತಿಯಗ ಇರಿಸುತ್ತಾರೆ. ಹಸಿಮಣ್ಣಿನಿಂದ ಜೀವ ಸೃಷ್ಟಿಯ ಚಿತ್ರಣ ಕಾವ್ಯದಲ್ಲಿ ಮುಂದುವರಿಯುತ್ತದೆ.

೬. ಶಿವನ ಇಚ್ಛೆಯಂತೆ ಬಾಳಭರಮದೇವರು ಆಗ ಬಿತ್ತಿ ಆಗ ಬೆಳೆಯುವ ಗಿಡದ ಹೂವಿನಿಂದ ಶಿವನನ್ನು ಪೂಜಿಸಲು ಬೀಜವನ್ನು ತರಲು ಹೊರಡುತ್ತಾನೆ. ಶಿವನು ನೀಡಿದ ಮೂರು ಹರಳುಗಳ ಸಹಾಯದಿಂದ ಹಾಲು ಸಮುದ್ರ, ಕೀಲು ಸಮುದ್ರ ದಾಟಿ ಜಂಬೂದ್ವೀಪಕ್ಕೆ ಬಾಳಭರಮನು ಬರುತ್ತಾನೆ. ಅಲ್ಲಿ ಈಜಾಡುತ್ತಿದ್ದ ಕಮಳಾದೇವಿ ಮತ್ತು ಆಕೆಯ ಆರು ಮಂದಿ ಸಹೋದರಿಯರಿಗೆ ತನ್ನ ಪರಿಚಯ ಮಾಡಿಕೊಳ್ಳುತ್ತಾನೆ. ಬಂದವನು ತನ್ನ ಮಗನೆಂದು ಅರಿತ ಕಮಳಾದೇವಿ ಆಗ ಬಿತ್ತಿ ಆಗ ಬೆಳೆಯುವ ಹೂವಿನ ಗಿಡದ ಬೀಜವನ್ನು ಕೊಡುತ್ತಾಳೆ. ಭರಮದೇವರು ಹಿಂತಿರುಗಿ ಹೋಗಲು ಕಮಳಾದೇವಿ ತನ್ನ ಎದೆಯ ಹಾಲನ್ನು ಮಣ್ಣಿನಲ್ಲಿ ಕಲಿಸಿ ಹಾಲಗುಂಬಳಕಾಯಿ ಸೃಷ್ಟಿಸಿ, ಅದನ್ನು ಬೆನ್ನಿಗೆ ಕಟ್ಟಿ ಅದರ ಸಹಾಯದಿಂದ ಸಮುದ್ರ ದಾಟಲು ಹೇಳಿ ಕಳುಹಿಸುತ್ತಾಳೆ.

---
೧. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೧೮೪, ಸಾಲು - ೧೮-೨೧

ಕಡಿಹುಟ್ಟ ಕಮಳಾದೇವೇನೆ ಮಣ್ಣ ಗುಂಪಿ ಮಾಡ್ಯಾಳೆ

ಮಣ್ಣ ಗಂಪಿ ಮಾಡ್ಯಾಳೆ ಮಣ್ಣಿಗ್ಗಿ ಹಾಲ ಹಿಂಡ್ಯಾಳ

ಆರುಮಂದಿ ಅಕ್ಕ ತಂಗಿದೇರ ನೀವು ಹಿಂಡರಿ ಅಂದಾಳ

ನೀವು ಹಿಂಡರಿ ಅಂದಾಳೆ ಗಟ್ಟ್ಯಾನ ಹಾಲ ಹಿಂಡ್ಯಾರ

ಹಾಲಗಟ್ಟಿ ಹಿಂಡ್ಯಾರೆ ಕಮಳಾದೇವಿ ಹಾಲೇನ

ಕಮಲಾದೇವಿ ಹಾಲೇನ ನೀರಿನ ವರ್ಣನಿದ್ದಾವ

ಬ್ರಹ್ಮದೇವರ ಕುಡದ ಹಾಲಭೂಮಿ ಮಣ್ಣಿಗ್ಗಿ ಹಿಂಡ್ಯಾಳ

ಭೂಮಿಗೆ ಹಿಂಡುತಾಳೇನೆ ಮಣ್ಣನ್ನು ಕಲಸುತಾಳೇನೆ

ಆರು ಮಂದಿ ನಾರ್‍ಯಾರೆ ಕಮಳಾದೇವಿ ಹಾಲೇನ

ಕಮಳಾದೇವಿ ಹಾಲೇನೆ ಈಸಕಾಯ ಮಾಡ್ಯಾರ

ಈಸಕಾಯಿ ಮಾಡ್ಯಾಳ ದೀಡಮಳಗೋಳ ಆದಾವ

ದೀಡ ಮಳದ ಕಾಯೇನೆ ಟೊಂಕಿಗ ಕಟ್ಟುತಾಳೇನ

ಕಡಿಹುಟ್ಟ ಕಮಳಾದೇವೇನ ಮಗನಿಗೆ ಹೇಳುತಾಳೇನ

ಹಾಲಿನ ಒಳಗೆ ಹುಟ್ಟ್ಯಾದೊ ಹಾಲಗುಂಬಳಂದಾಳ [೧]

ಹಾಲು ಮತ್ತು ಮಣ್ಣು ಬೆರೆತ ಎರಡನೆ ಸಂದರ್ಭ ಇದಾಗಿದೆ. ತಾಯಿ ಕಮಳಾದೇವಿ ಬಾಳ ಭರಮದೇವನ ರಕ್ಷಣೆಗೆ ಹಾಲುಗುಂಬಳ ಸೃಷ್ಟಿಸಿದ್ದನ್ನು ಕಾವ್ಯ ಚಿತ್ರಿಸುತ್ತದೆ.

೭. ಸ್ವಾಮರಾಯ ಮತ್ತು ತುಕ್ಕಪ್ಪರಾಯರು ಗುರು ಗೋರಕನಾಥರ ಏಳುನೂರು ಬಾಲಜನ್ನಿಗಿಗಳನ್ನು ಬರಗಾಲದಿಂದ ರಕ್ಷಿಸಲು ಸಹಾಯಕ್ಕೆ ನಿಲ್ಲುತ್ತಾರೆ. ಇವರು ಗುರುವಿನೊಡನೆ ಮೇವು ನೀರಿನ ಆಸರೆ ಹುಡುಕುತ್ತಾ ಬಾಬಾನ ಗುತ್ತಿಗೆ ಬಂದು ದೊಡ್ಡಿ ಹಾಕಿ ಆಕಳುಗಳನ್ನು ಸಲಹುತ್ತಿದ್ದರು.

ಒಂದು ದಿನ ಶಿವ ಪಾರ್ವತಿಯರು ವೃದ್ಧ ದಂಪತಿಗಳ ವೇಷದಲ್ಲಿ ಬಂದು ಸ್ವಾಮರಾಯ ಮತ್ತು ತುಕ್ಕಪ್ಪರಾಯರ ಮಡದಿಯಾದ ಅಕ್ಕ ಕಾನಾಬಾಯಿ ಮತ್ತು ತಂಗಿ ಅಮೃತಾಬಾಯಿಯರಿಗೆ ತಮ್ಮ ಕೊರಳಲ್ಲಿದ್ದ ಮಾಣಿಕ್ಯದ ಹರಳನ್ನೂ, ಜಂಬು ನೀಲದ ಹರಳನ್ನೂ ತೆಗೆದುಕೊಟ್ಟು

---

೧. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೧೦೮, ೧೦೯
ಸಾಲು - ೨೪-೩೨, ೧-೫

ದೇವರ ಜಗಲಿಯ ಮೇಲೆ ಇಡಲು ಹೇಳುತ್ತಾರೆ. ಅದರಂತೆ ಇಟ್ಟ ಹರಳುಗಳನ್ನು ಸ್ವಾಮರಾಯ ಮತ್ತು ತುಕ್ಕಪ್ಪರಾಯರು ಮನೆಗೆ ಬಂದಾಗ ತೋರಿಸುತ್ತಾರೆ. ಅಲ್ಲಿ ಅವರಿಗೆ ಅಚ್ಚರಿ ಕಾದಿರುತ್ತದೆ.

ಜೇವರಜಗಲಿಗೆ ಹೋಗ್ಯಾರೆ ದೇವರ ಜಗಲಿ ಮ್ಯಾಲೇನೆ
ಜಂಬುನೀಲ ಜಕರಾಯ ಮಾಣಿಕದ ಹರಳ ಮಾಳಣ್ಣ
ಮಾಂಸಪಿಂಡನಲ್ಲೆನೆ ಮಾನವ ಪಿಂಡನಾದವೆ
ಮಾನವ ಪಿಂಡನಾದರೆ ಸಂಬಾ ನಮಗೆ ಕೊಟ್ಟಾನೆ
ಸಂಬಾ ನಮಗೆ ಕೊಟ್ಟಾನೆ ಶಿವನು ನಮಗೆ ಕೊಟ್ಟಾನೆ
ಜಾತ ಜ್ಯೋತಿ ಮಕ್ಕಳೆ ಜಕ್ಕಪ್ಪ ಮಾಳಪ್ಪನೆ [೧]

ಹೀಗೆ ಜಕ್ಕಪ್ಪ ಮತ್ತು ಮಾಳಿಂಗರಾಯನ ಜನನದ ವೃತ್ತಾಂತವು ಕಾವ್ಯದಲ್ಲಿ ಬಂದಿದೆ.

೮. ಅಮೋಗಿಸಿದ್ಧನು ಪದ್ಮಾವತಿಯನ್ನು ಮದುವೆಯಾಗಿದ್ದರೂ ಸಾಧುವಾಗಿ ಮೂರೂರು ಮುಮ್ಮೆಟ್ಟಿ ಗುಡ್ಡದಲ್ಲಿ ಇರುತ್ತಾನೆ. ಪದ್ಮಾವತಿ ಅರಕೇರಿಯಲ್ಲಿ ವಾಸಿಸುತ್ತಿರುತ್ತಾಳೆ. ಅಮೋಗಿಸಿದ್ಧನ ವರದಾನದಿಂದ ಕುಂಬಾರ ಗುಂಡಯ್ಯ ಮಳಸಿದ್ಧಪ್ಪನೆಂಬ ಮಗನನ್ನು ಪಡೆದಿರುತ್ತಾನೆ. ಅಮೋಗಿಸಿದ್ಧ ಮತ್ತು ಪದ್ಮಾವತಿಯರಿಗೆ ಮಕ್ಕಳಿಲ್ಲದ್ದರಿಂದ ಕುಂಬಾರ ಗುಂಡಯ್ಯನು ಮಳಸಿದ್ಧಪ್ಪನನ್ನು ಅಮೋಗಿಸಿದ್ಧನ ಬಳಿಗೆ ತಂದು ಬಿಡುತ್ತಾನೆ. ಈತನೇ ಅಮೋಗಿಸಿದ್ದನ ಸಾಕುಮಗನಾಗುತ್ತಾನೆ, ಮಾಳಸಿದ್ದಪ್ಪನು ಅರಕೇರಿಗೆ ಬಂದು ತಾಯಿಗೆ ನಮಸ್ಕರಿಸಿ ಆಶೀರ್ವಾದ ಪಡೆದು ಅಲ್ಲಿಂದ ಅಮೋಗಿಸಿದ್ಧನ ಬಳಿಗೆ ಬಂದು ತನಗೆ ತಂಗಿ, ತಮ್ಮಂದಿರು ಬೇಕೆಂದು ಕೇಳಿಕೊಳ್ಳುತ್ತಾನೆ. ಅಮೋಗಿಸಿದ್ಧನು ಐದು ಉತ್ತತ್ತಿ ಹಣ್ಣನ್ನು ತರಿಸಿ, ಮಂತ್ರಿಸಿ ಅವುಗಳನ್ನು ಪದ್ಮಾವತಿಗೆ ನೀಡಲು ಹೇಳುತ್ತಾನೆ. ಅವುಗಳನ್ನು ತಂದು ಮಳಸಿದ್ಧಪ್ಪನು ಪದ್ಮಾವತಿಯ ಕೈಯಾಗೆ ಕೊಡುತ್ತಾನೆ.

ಪದುಮಾವತಿಯ ಕೈಯಾಗ ಐದ ಉತ್ತತ್ತಿ ಹಣ್ಣೇನ
ಐದು ಉತ್ತತ್ತಿ ಹಣ್ಣೇನ ಮಳಸಿದ್ಧಪನೆ ಕೊಟ್ಟಾನ
ತಂದಿಯ ಹೆಸರ ಹೇಳ್ಯಾನ ಮೂರು ತಮ್ಮದೇರು ಬಂದಾರ
ನನಗೂ ತಮ್ಮದೇರು ಆದಾರೆ ನಿನಗೂ ಮಕ್ಕಳಾದರ
ನಿನಗೂ ಮಕ್ಕಳಾದರ ನನಗೂ ತಮ್ಮದೇರು ಆದಾರ

೧. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೩೩೬, ಸಾಲು - ೨೦-೨೫

ನಾಲ್ಕೂ ಮಂದಿ ಮಕ್ಕಳು ಒಬ್ಬಕಿ ಹೆಣಮಗಳಪ್ಪ

ಐದು ಮಂದಿ ಮಕ್ಕಳು ನನ್ನ ಉಳಸಿ ಹಾರವ್ವ

ನನ್ನ ಹಿಡಿದು ಆರಮಂದಿ ನಿನ್ನಗ ಮಕ್ಕಳ ಹಾರವ್ವ

ಪದಮವತಿಯನಲ್ಲೇಳ ಒಳ್ಳೆದು ಒಳ್ಳೆದಂದಾಳ [೧]

ಮಂತ್ರಶಕ್ತಿಯಿಂದ ಉದಿಸುವ ಐದು ಮಂದಿ ಮಕ್ಕಳ ಜೊತೆಗೆ ತನ್ನನ್ನು ಮಗನೆಂದು ಸ್ವೀಕರಿಸಿ, ಒಟ್ಟು ಆರು ಮಕ್ಕಳೆಂದು ತಿಳಿಯಲು ಮಳಸಿದ್ಧಪ್ಪನು ಪದ್ಮಾವತಿಯಲ್ಲಿ ಕೇಳಿಕೊಳ್ಳುತ್ತಾನೆ. ಪದ್ಮಾವತಿಯು ಐದು ಉತ್ತತ್ತಿ ಹಣ್ಣುಗಳನ್ನು ತೆಗೆದುಕೊಂಡು ಜಗಲಿಯ ಮೇಲೆ ಇಡುತ್ತಾಳೆ

ಮಹಾದೇವನ ಜಗಲಿಯ ಮ್ಯಾಲೇನ ಕೊಡಗೋಳು ಐದು ಇಟ್ವಾಳ

ಕೊಡಗೋಳು ಐದ ಇಟ್ವಾಳ ಮಂತರ ಪಿಂಡನಾದವ

ಒಂದಾ ದಿನಮಾನಾದಾವೆ ಎರಡ ತಿಂಗಳಾದವ

ಎಂಟು ತಿಂಗಳಾದವೆ ಒಂದಾ ವರ್ಷನಾದವ

ಬೆಳ್ಳಿ ಹೊಳೆದಂಗ ಹೊಳದಾರ ಬಂಗಾರ ಹೊಳದಂಗ ಹೊಳದಾರ [೨]

ಹೀಗೆ ಅಮೋಗಿಸಿದ್ಧನು ನೀಡಿದ ಮಂತ್ರದ ಐದು ಉತ್ತತ್ತಿ ಹಣ್ಣುಗಳಿಂದ ಐದು ಮಕ್ಕಳು ಹುಟ್ಟುತ್ತವೆ. ಇವರಲ್ಲಿ ಹಿರಿಯವಳು ಹೆಣ್ಣು ಮಗಳು ರೆಬಕವ್ವ ಆಗಿದ್ದಳು. ಉಳಿದವರು ನಾಲ್ಕು ಗಂಡು ಮಕ್ಕಳು.

ಹಾಲುಮತ ಕಾವ್ಯದುದ್ದಕ್ಕೂ ಸೃಷ್ಟಿಯ ಸಂಗತಿಗಳು ಹಾಸುಹೊಕ್ಕಾಗಿ ಚಿತ್ರಣಗೊಂಡಿದೆ. ಮಂತ್ರ ಶಕ್ತಿಯಿಂದ ಮಕ್ಕಳನ್ನು ನೀಡುವ ಪವಾಡಗಳು ಸಾಮಾನ್ಯವಾಗಿ ಎಲ್ಲಾ ಪುರಾಣಕಾವ್ಯಗಳಲ್ಲಿ ಕಂಡುಬರುತ್ತವೆ. ಆದರೆ ಹಾಲುಮತ ಎಂಬ ಮಾತಿಗೆ ಅರ್ಥ ತುಂಬುವಂತೆ ಹಾಲು-ಮಣ್ಣು ಬೆರತು ಸೃಷ್ಟಿಕ್ರಿಯೆ ನಡೆದದ್ದನ್ನು ಕಾವ್ಯ ಚಿತ್ರಿಸುತ್ತದೆ. ಜೊತೆಗೆ ಕುರುಬ ಜನಾಂಗ ಹಾಲುಮತದವರು ಎಂದು ತಮ್ಮನ್ನು ಕರೆದುಕೊಳ್ಳಲು ಕಾರಣವಾದ ಪೌರಾಣಿಕ ಹಿನ್ನೆಲೆಯನ್ನು ಕಾವ್ಯ ಒದಗಿಸಿಕೊಟ್ಟಿದೆ.

---

೧. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೫೯೯, ಸಾಲು - ೨೩-೩೧

೨. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೬೦೦, ಸಾಲು - ೧- ೫

## ೬ ಸಂಸ್ಕೃತಿ ವಿಕಾಸ ಮತ್ತು ಹಬ್ಬ ಆಚರಣೆಗಳು

ಒಂದು ಸಂಸ್ಕೃತಿ ಹುಟ್ಟಿಕೊಳ್ಳುವ ಸಂದರ್ಭವು ಶಾಂತಮುತ್ಯಾನ ಮೂಲಕ ಕಾಣಿಸಿಕೊಂಡಿದೆ. ಈತನು ಐದು ರಾಕ್ಷಸರನ್ನು ಕೊಂದು ಕುರಿಗಳನ್ನು ನಿರ್ಮಿಸುತ್ತಾನೆ. ಮತ್ತೊಬ್ಬ ರಾಕ್ಷಸನನ್ನು ಮುರಿದು ಟಗರ ತಯಾರು ಮಾಡುತ್ತಾನೆ. ಅನಂತರ ಕುರಿಕಾಯುತ್ತಾ ಅವುಗಳಿಂದ ಉಣ್ಣೆ ತೆಗೆಯುತ್ತಾನೆ. ಡುಳ್ಳಾಸೂರನೆಂಬ ದೈತ್ಯನ ಶಿರವ ಕತ್ತರಿಸಿ ಕಂಬಳಿ ನೇಯಲು ಬೇಕಾದ ಸಾಮಗ್ರಿಗಳನ್ನು ತಯಾರಿಸುತ್ತಾನೆ. ಕಂಬಳಿ ನೆಯ್ದು ಶಿವ ಪಾರ್ವತಿಯರಿಗೆ 'ಅಯ್ಯಾರಿ' ಮಾಡುತ್ತಾನೆ. ಕುರಿಸಾಕಣೆ, ಉಣ್ಣೆ ಉತ್ಪಾದನೆ, ಅದರಿಂದ ಕಂಬಳಿ ತಯಾರಿಸುವ ಕಲೆಗಾರಿಕೆ ಪ್ರಾರಂಭಗೊಳ್ಳುವುದರ ಮೂಲಕ ಸಂಸ್ಕೃತಿಯ ಹುಟ್ಟು ಮತ್ತು ವಿಕಾಸದ ಹಾದಿ ಕಾವ್ಯದಲ್ಲಿ ಚಿತ್ರಿತವಾಗಿದೆ.

ಕುರಿಯಾ ಕಾಯುತಾನೇನ ಮರಿಯಾ ಕಾಯುತಾನೇನ
ಉಣ್ಣು ತೆಗೆಯುತಾನೇನ ಕಂಬಳಿ ಮಾಡುತಾನೇನ [೧]

ಕಂಬಳಿ ಮಡಲು ನೇಯ್ಗೆಗೆ ಬೇಕಾದ ಉಣ್ಣೆಯನ್ನು ಕತ್ತರಿಸಲು ಕತ್ತರಿಯನ್ನು ಡೊಳ್ಳಸುರನನ್ನು ಕೊಂದು ತಯಾರಿಸಿಕೊಳ್ಳುತ್ತಾನೆ.

ಕಂಬಳಿ ನೈಯುವುದಕಲ್ಲೇಳ ಕತ್ತರಿ ತಯ್ಯಾರಿ ಮಾಡ್ಯಾನ
ಕತ್ತರಿ ತಯ್ಯಾರ ಮಾಡಿದ್ದ ಉಣ್ಣು ಕತ್ತರಿಸತಾನೇನ [೨]

ಹೀಗೆ ವೃತ್ತಿಯ ಮೂಲಕ ಸಂಸ್ಕೃತಿ ಬೆಳೆಯತೊಡಗು. ಶಾಂತಮುತ್ಯಾ ಕುರಿಕಾಯಲು ಬ್ರಹ್ಮನಿಗೆ ನೇಮಿಸಿದಾಗ, ಬ್ರಹ್ಮನು ವಿಷ್ಣುವಿಗೆ, ವಿಷ್ಣುವು ರುದ್ರನಿಗೆ, ರುದ್ರನು ಮಹಾದೇವನಿಗೆ ವರ್ಗಾಯಿಸುತ್ತಾರೆ. ಇವರೆಲ್ಲಾ ಕುರಿಕಾಯ್ದು ಬೇಸರಗೊಂಡಾಗ ಪಾರ್ವತಿಗೆ ವಹಿಸುತ್ತಾರೆ. ಪಾರ್ವತಿ ಸ್ವರ್ಗದಲ್ಲಿ ಕುರಿಕಾಯುತ್ತಿದ್ದು ನಂತರ ಬೇಸರವಾಗಿ ಸ್ವರ್ಗದ ಬಾಗಿಲು ತೆರದು ಭೂಮಿಗೆ ಹೊಡೆದು ತಂದು ಹುತ್ತಕ್ಕೆ ಕೂಡಿ ಮುಚ್ಚಿಡುತ್ತಾಳೆ. ಮಣ್ಣು ಮತ್ತು ತನ್ನ ಎದೆಯ ಹಾಲಿನ ಮಿಶ್ರಣದಿಂದ ತಯಾರು ಮಾಡಿದ ಬೊಂಬೆಗಳಿಗೆ ಜೀವ ತುಂಬಿಸಿ ಮುದ್ದವ್ವ -ಮುದಗೊಂಡವರನ್ನು ಸೃಷ್ಟಿಸುತ್ತಾಳೆ. ಇವರಿಗೆ ನಾಲ್ಕು ಜನ ಮಕ್ಕಳಾಗಿ ಇವರೆಲ್ಲಾ ಕೃಷಿಯನ್ನು ಅವಲಂಬಿಸುತ್ತಾರೆ. ಈಗ ಕೃಷಿ ಸಂಸ್ಕೃತಿ ಮೈದೋರುತ್ತದೆ. ಇದು ಸಂಸ್ಕೃತಿ ವಿಕಾಸದ ಹಾದಿಯಲ್ಲಿ ಬಹು ಮುಖ್ಯವಾದ

---

೧. ಡಾ|| ವೀರಣ್ಣದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ (೨೦೦೦) ಪುಟ ೭, ಸಾಲು ೯ -೧೦
೨. ಡಾ|| ವೀರಣ್ಣದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ (೨೦೦೦) ಪುಟ ೭, ಸಾಲು ೨೧-೨೨

ಘಟ್ಟವೂ ಆಗಿದೆ. ಉಳುಮೆಗಾಗಿ ಎತ್ತುಗಳನ್ನು ಬಳಸುತ್ತಾರೆ.

ಮುದ್ದವ್ವ-ಮುದಗೊಂಡರ ಕಿರಿಯ ಮಗ ದುಡಿಯದ ಕಾರಣ ಅಣ್ಣಂದಿರು ಮಡದಿಯರ ಮಾತು ಕೇಳಿ ಕಿರಿಯನಾದ ಪದುಮಗೊಂಡನನ್ನು ಬೇರೆ ಹಾಕುತ್ತಾರೆ. ಇದರಿಂದ ಆತ ತಾಯಿಯ ಸಲಹೆಯಂತೆ ಉಳುಮೆ ಮಾಡುವಾಗ ಅಲ್ಲಿದ್ದ ಹುತ್ತಕ್ಕೆ ನೇಗಿಲು ಬಿಡಬೇಡವೆಂದು ತಾಯಿ ಎಚ್ಚರಿಸಿದ್ದರೂ, ನೇಗಿಲು ತಾಗಿ ಹುತ್ತ ಸೀಳಿಹೋಗುತ್ತದೆ. ಅಲ್ಲಿಂದ ಹೊರಬಂದ ಕುರಿಗಳನ್ನು ಕಾಯುತ್ತಾ ಪದುಮಗೊಂಡ ಕಾಡಿನತ್ತ ಹೊರಟೇ ಬಿಡುತ್ತಾನೆ. ಇಲ್ಲಿ ಕೃಷಿಯಿಂದ ಮತ್ತೆ ಕುರಿಸಾಕಣೆಯ ಕಡೆಗೆ ತಿರುಗಿ ಸಾಗುತ್ತದೆ.

ಪದುಮಗೊಂಡ ಮೂರು ದಿನಗಳ ಕಾಲ ಊಟವಿಲ್ಲದೆ ಕಾಡಿನಲ್ಲಿ ಕುರಿಗಳ ಹಿಂದೆ ನಡೆದು ಬಳಲಿದ್ದಾಗ ಶಿವ ಅಲ್ಲಿಗೆ ಬರುತ್ತಾನೆ. ಪದುಮಗೊಂಡ ತನಗೆ ಹಸಿವಾಗಿದೆಯೆಂದು ಹೇಳಿಕೊಂಡಾಗ ಶಿವನು ಗಿಣ್ಣು ಮಾಡುವುದಾಗಿ ಹೇಳುತ್ತಾನೆ.

ಹಸಿಯ ಹಾಲನಿದ್ದಾವೆ ಬಿಸಿಯಾಗಿಣ್ಣ ಮಾಡಾರೆ

ಬೆಂಕಿ ಬೇಕೇಳಂದಾನ ಖೊಬ್ಬರಿ ಬೇಕೇಳಂದಾನ ೧

ಗಿಣ್ಣು ಮಾಡಲು ಕೊಬ್ಬರಿ ಗುಂಡು ಮತ್ತು ಬೆಂಕಿ ಶೋಧ ಮಾಡಿ ತರಿಸಿದ ಶಿವನು ಕೊಬ್ಬರಿ ಗುಂಡನ್ನು ಹಿಡಿದು ಕುರಿಗಳಿಂದ ಹಾಲು ಕರೆಯುವ ಕಲೆಯನ್ನು ಪದುಮಗೊಂಡನಿಗೆ ಕಲಿಸಿಕೊಡುತ್ತಾನೆ. ಮೊದಲು ಶಿವನು ಹಾಲು ಕರೆಯುವ ಚಿತ್ರ ಹೀಗಿದೆ.

ಕೈಯಾಗ ಖೊಬ್ಬರಿ ಹಿಡಿದಾಗ ತೆಳಗ ಕೂಡುತಾನೇನ

ಎಡಗೈ ಕಾಲ ಹಿಡಿದಾನ ಬಲಗೈ ಕುಂಡ್ರುತಾನೇನ

ಎರಡು ತೊಡಿಯ ನಡುವೇನ ಕೊಬ್ಬರಿ ಇಡುವುತಾನೇನ

ಖೊಬ್ಬರಿ ಇಡುವುತಾನೇನ ಬಲಗೈಲಿ ಕಾಲ ಹಿಡಿತಾನ

ಎಡಗೈ ಕೆಚ್ಚಲದೊಳಗೇನ ಕೈಯ ಹಾಕುತಾನೇನ

ಎರಡು ಕೈಯಲಿಂದೇನ ಹಾಲ ಹಿಂಡುತಾನೇನ

ಹಾಲ ಹಿಂಡುತಾನೇನ ಮೂರ ಕುರಿಗೊಳ ಹಿಂಡ್ಯಾನ ೨

ಹೀಗೆ ಹಾಲು ಕರೆದ ಶಿವ ನಂತರ ಪದುಮಗೊಂಡನಿಗೆ ಹೇಳಿ ಅವನಿಂದಲೇ ಹಾಲು ಕರೆಯಿಸುತ್ತಾನೆ.

---

೧. ಡಾ॥ ವೀರಣ್ಣದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ (೨೦೦೦) ಪುಟ ೨೪, ಸಾಲು ೧೬- ೧೭
೨. ಡಾ॥ ವೀರಣ್ಣದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ (೨೦೦೦) ಪುಟ ೨೬, ಸಾಲು ೧೪ - ೨೦

ಬಾರೋ ಬಾರೋ ಪದುಮಣ್ಣ ನೀನು ಹಿಂಡಲಿ ಬೇಕಯ್ಯ

ಪದುಮಗೊಂಡನ ಕೈಯಾಗ ಖೊಬ್ಬರಿ ಕೊಡುವುತಾನೇನ [೧]

ಪದುಮಗೊಂಡ ಶಿವನು ಕೊಟ್ಟ ಕೊಬ್ಬರಿ ಹಿಡಿದು, ಹಾಲು ಕರೆಯಲು ಕುರಿಯನ್ನು ಹುಡುಕಿ ಹಿಡಿಯುವುದಕ್ಕೆ ಮುಂದಾಗುತ್ತಾನೆ. ಶಿವನು ಅವನಿಗೆ ಹಾಲು ಕೊಡುವ ಕುರಿಯನ್ನು ತೋರಿಸಿಕೊಡುತ್ತಾನೆ. ಪದುಮಗೊಂಡನು ಹಾಲು ಕರೆಯುವ ಸಂದರ್ಭ ಹೀಗಿದೆ.

ಪದಮಗೊಂಡನಲ್ಲೇಳ ಬಲಗೈ ಖೊಬ್ಬರಿ ಹಿಡಿದಾಗ

ಎಡಗೈ ಕಾಲ ಹಿಡಿದಾನೆ ತೆಳಗೆ ಕುಂದ್ರುತಾನೇನ

ಮಳಕಾಲದೊಳಗನಲ್ಲಪ್ಪ ಖೊಬ್ಬರಿ ಹಿಡಿಯುತಾನೇನ

ಬಲಗೈ ಕಾಲ ಹಿಡಿದಿದ್ದ ಎಡಗೈ ಕಾಲ ಹಿಡಿದಿದ್ದ

ಎಡಗೈ ಕಾಲ ಬಿಟ್ಟಿದ್ದ ಕೆಚ್ಚಲದೊಳಗೆ ಕೈಯ ಹಾಕಿದ್ದ

ಕೆಚ್ಚಲದೊಳಗೆ ಕೈ ಹಾಕಿ ಎರಡು ಕೈಲಿ ಹಿಂಡ್ಯಾನ

ಐದು ಕುರಿಗೊಳು ಅಲ್ಲಪ್ಪ ಇಬ್ಬರು ಹಿಂಡುತಾರೇನ [೨]

ಹೀಗೆ ಕುರಿಯಿಂದ ಹಾಲು ಕರೆಯುವ ಕಲೆಯನ್ನು ಶಿವನು ಪದುಮಗೊಂಡನಿಗೆ ತೋರಿಸಿಕೊಟ್ಟು ಕರೆಸುವ ಪ್ರಸಂಗವನ್ನು ಕಣ್ಣಿಗೆ ಕಟ್ಟುವಂತೆ ಕಾವ್ಯ ಬಣ್ಣಿಸುತ್ತದೆ. ಇದೊಂದು ಶಬ್ದ ಚಿತ್ರವಾಗಿ ಮನ ತುಂಬುತ್ತದೆ.

ಹಾಲು ಕರೆದ ಮೇಲೆ ಅದನ್ನು ಗಿಣ್ಣಾಗಿಸುವುದು ಒಂದು ಕಲೆ. ಶಿವನು ಅದನ್ನು ಪದುಮಗೊಂಡನಿಗೆ ವಿವರಿಸಿ ಹೇಳಿ ಅದರಂತೆ ಆತನ ಕೈಯಲ್ಲೇ ಮಾಡಿಸುತ್ತಾನೆ. ಬಿಸಿಯಾದ ಗಿಣ್ಣನ್ನು ಅವರು ತಯಾರಿಸಿದ್ದನ್ನು ಕಾವ್ಯದಲ್ಲಿ ಹೀಗೆ ತರಲಾಗಿದೆ.

ಬಾರೋ ಬಾರೋ ಪದುಮಣ್ಣ ಬೆಂಕಿಯ ಮ್ಯಾಲ ಇಡಬೇಕ

ಖೊಬ್ಬರಿ ತರುವತಾನೇನ ಬೆಂಕಿಯ ಮ್ಯಾಲೆ ಇಟ್ಟಾರ

ಬೆಂಕಿಯ ಮ್ಯಾಲೆ ಇಟ್ಟಾನ ಹಸಿಯ ಹಾಲ ಹೋದವ

ಹಸಿಯ ಹಾಲ ಹೋದಾವೆ ಬಿಸಿಯ ಗಿಣ್ಣ ನಾದವೆ [೩]

ಹಸಿಯ ಹಾಲನ್ನು ಕಾಯಿಸಿ ಬಿಸಿ ಬಿಸಿಯಾದ ಗಿಣ್ಣು ಮಾಡುವ ವಿಧಾನವನ್ನು ಪದುಮಗೊಂಡ ಶಿವನಿಂದ ಕಲಿತುಕೊಳ್ಳುತ್ತಾನೆ. ಹೀಗೆ ಸಂಸ್ಕೃತಿಯ ವಿಕಾಸವನ್ನು ಕಾವ್ಯ ಹೇಳುತ್ತಾ ಸಾಗುತ್ತದೆ.

---

೧. ಡಾ|| ವೀರಣ್ಣದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ (೨೦೦೦) ಪುಟ ೨೬, ಸಾಲು ೨೪ - ೨೫
೨. ಡಾ|| ವೀರಣ್ಣದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ (೨೦೦೦) ಪುಟ ೨೭, ಸಾಲು ೨ - ೮
೩. ಡಾ|| ವೀರಣ್ಣದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ (೨೦೦೦) ಪುಟ ೨೭, ಸಾಲು ೧೩ - ೧೬

ಪದುಮಗೊಂಡ ಮತ್ತು ಶಿವಲಿಂಗಮ್ಮರಿಗೆ ಶಿವ, ಪಾರ್ವತಿ, ದೇವತೆಗಳೆಲ್ಲಾ ನಿಂತು ಮದುವೆ ಮಾಡಿಸುತ್ತಾರೆ. ಇವರು ಅಡವಿಯಲ್ಲಿ ಕುರಿ ಮೇಯಿಸುತ್ತಾ ಮುಂದೆ ಮುಂದೆ ಸಾಗುತ್ತಾ ಹೋಗುತ್ತಾರೆ. ಇವರಿಗೆ ಗಂಡು ಮಗು ಆದಾಗ, ಅದು ಕಾಡಿನಲ್ಲೇ ಹುಟ್ಟಿದ್ದರಿಂದ ಮಡ್ಡಪ್ಪನೆಂದು ಹೆಸರಿಸುತ್ತಾರೆ. ಮಡ್ಡಪ್ಪ ನಾಲ್ಕೈದು ವರ್ಷದವನಾಗಿದ್ದಾಗ ಒಂದು ರಾತ್ರಿ ಮಗುವನ್ನು ಮಲಗಿಸಿ, ಕುರಿ ಹಿಂಡಿನ ಒಂದೊಂದು ಕಡೆ ಗಂಡ ಹೆಂಡತಿಯರು ಮಲಗುತ್ತಾರೆ. ಮುಂಜಾನೆ ಎದ್ದು ಕುರಿಗಳನ್ನು ಹೊಡೆದುಕೊಂಡು ಹೊರಟುಬಿಡುತ್ತಾರೆ. ಮಡ್ಡಪ್ಪ ಎದ್ದು ನೋಡಿದಾಗ ತಂದೆ, ತಾಯಿ ಕಾಣದೆ, ಹೆಗಲ ಮೇಲೆ ಮೂರು ಮೊಳದ ಕಂಬಳಿ ಹಾಕಿಕೊಂಡು ಆಕಳುಗಳು ಇದ್ದ ಗುಡ್ಡಕ್ಕೆ ಬಂದು ಅಲ್ಲಿಯ ಗಿಡ ಹತ್ತಿ ಕುಳಿತು ಬಿಡುತ್ತಾನೆ. ಆಕಳು ಬಂದು ಅಲ್ಲಿದ್ದ ಕಲ್ಲಿನ ಡೋಣಿಯಲ್ಲಿ ತಮ್ಮ ಕೆಚ್ಚಲಿನಿಂದ ಹಾಲು ಹರಿಸಿದ್ದನ್ನು ಮಡ್ಡಪ್ಪ ನೋಡುತ್ತಾನೆ. ಮತ್ತೆ ಅವು ಕಾಡಿಗೆ ಮೇಯಲು ಹೋದಾಗ ಗಿಡದಿಂದ ಇಳಿದು ಹಾಲು ಕುಡಿದು ಮತ್ತೆ ಗಿಡ ಹತ್ತಿ ಕೂರುತ್ತಾನೆ. ಕ್ರಮೇಣ ಆಕಳುಗಳು ತಬ್ಬಲಿಯಾದ ಮಡ್ಡಪ್ಪನನ್ನು ಕಾಪಾಡತೊಡಗುತ್ತದೆ. ಒಮ್ಮೆ ಬಡವನಾದ ಗಾಣಿಗ ಮಲ್ಲಪ್ಪನನ್ನು ಯಾರೂ ಕೂಲಿಗೆ ಕರೆಯದೆ ಉಪವಾಸವಿದ್ದು, ಗುದ್ದಲಿ ಹೆಗಲ ಮೇಲೆ ಹಾಕಿಕೊಂಡು ಅಡವಿಗೆ ಬರುತ್ತಾನೆ. ಮಡ್ಡಪ್ಪನಿದ್ದ ಗಿಡದ ಬಳಿಗೆ ಬಂದಾಗ ಮಡ್ಡಪ್ಪ ಕನಿಕರಿಸಿ ಹಾಲು ಕುಡಿಸಿ, ಮನಗೆ ಕೊಂಡೊಯ್ಯಲು ಹೇಳುತ್ತಾನೆ. ಮಲ್ಲಪ್ಪನ ಹೆಂಡತಿ ಕೊಡದಲ್ಲಿ ತುಂಬಿಸಿ ತರಿಸಿಕೊಂಡು ಹಾಲಿನ ವ್ಯಾಪಾರ ಪ್ರಾರಂಭಿಸಿ ಶ್ರೀಮಂತರಾಗುತ್ತಾರೆ. ಮಡ್ಡಪ್ಪನಿಗೆ ಮಲ್ಲಪ್ಪ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿದ್ದರಿಂದ ಮಡ್ಡಪ್ಪನು ಮಲ್ಲಪ್ಪನಿಗೆ ತನ್ನ ಹತ್ತಿರವಿದ್ದ ಮೂರು ಮೊಳ ಕಂಬಳಿ ಕೊಟ್ಟು ಗೌಳಿಗನಾಗಲು ತಿಳಿಸಿ ಎಮ್ಮೆ ಆಕಳು ಸಾಕಲು ಹಚ್ಚುತ್ತಾನೆ. ಜೊತೆಗೆ ಪಶುಪಾಲನೆ ಬಗ್ಗ ತಿಳಿಸುತ್ತಾನೆ.

ಎರಡ ಎಮ್ಮಿ ಇದ್ದರೆ ಒಂದೇ ಆಕಳ ಕಟ್ಟಯ್ಯ

ಎರಡ ಎಮ್ಮಿ ಇದ್ದರೆ ಒಂದು ಆಕಳ ತರಬೇಕ

ಎಂಟು ಎಮ್ಮಿನಿದ್ದರ ಒಂದೇ ಆಕಳ ಇರಬೇಕ

ಹತ್ತು ಎಮ್ಮಿನಿದ್ದರ ಒಂದೇ ಆಕಳ ಇರಬೇಕ

ಆಕಳ ಕುಣಿಕಿ ಬಿಚ್ಚಾಗ ಎಮ್ಮಿ ಬಯಲಿಗ ಬಿಡಬೇಕ

---

ನಾನು ಕೊಟ್ಟ ಮೂರ ಮೊಳದ ಕಂಬಳಿ ಹೆಗಲಿಗ ಇರಬೇಕ

ಕಂಬಳಿ ಹೆಗಲಿಗ ಇರಬೇಕ ಬಡಗಿ ಕೈಯಾಗ ಇರಬೇಕ [೧]

ಗಾಣಿಗ ಮಲ್ಲಪ್ಪನು ಮಡ್ಡಪ್ಪನಿಂದಾಗಿ ಗೌಳಿಗನಾಗುತ್ತಾನೆ. ಹೈನುಗಾರಿಕೆ ಲಾಭದಾಯಕವಾದುದು ಎಂಬುದನ್ನು ಇಲ್ಲಿ ತಿಳಿಸಿಕೊಡಲಾಗಿದೆ. ಹೀಗಾಗಿ ಕೆಳವರ್ಗದವನೆನಿಸಿದ ಮಲ್ಲಪ್ಪ ಹೈನುಗಾರಿಕೆಯ ಮೂಲಕ ವೃತ್ತಿಯಲ್ಲಿ ಆದ ಮಾರ್ಪಾಟಿನಿಂದ ಸಾಮಾಜಿಕವಾಗಿ ಒಂದು ಸ್ತರ ಮೇಲಿರದಂತೆಯೂ ಆಗುತ್ತದೆ. ಜೊತೆಗೆ ಜೀವನ ಶೈಲಿ ಬದಲಾಗುತ್ತದೆ.

ಕೃಷಿಯನ್ನು ಅವಲಿಂಬಿಸಿಕೊಂಡವರಲ್ಲಿ ಕೃಷಿ ಸಂಬಂಧವಾದ ಆಚರಣೆಗಳು ಹೆಚ್ಚು ಕಂಡು ಬರುತ್ತವೆ. ಎಳ್ಳಮಾವಾಸ್ಯೆ ಸಂದರ್ಭದಲ್ಲಿ ಆಗತಾನೆ ಮದುವೆಯಾಗಿ ಗಂಡನ ಮನೆಗೆ ಹೋಗಿರುವ ಹೆಣ್ಣುಮಕ್ಕಳನ್ನು ತವರಿಗೆ ಕರೆಸಿ ಬೆಳೆದ ಹೊಲಗಳಲ್ಲಿ ಚೆರಗ ಚೆಲ್ಲುವ ಸಂಪ್ರದಾಯ ಈ ಕಾವ್ಯದಲ್ಲಿ ಚಿತ್ರಿತವಾಗಿದೆ. ಊರಿನ ಎಲ್ಲಾ ಹೆಣ್ಣು ಮಕ್ಕಳು ತಮ್ಮ ಅಣ್ಣ ತಮ್ಮಂದಿರೊಡನೆ ಹೊಲಕ್ಕೆ ಬಂದು ಕಬ್ಬು, ಕಾಯಿ ಪಡೆದು, ಉಲ್ಲಾಸದಿಂದ ಚೆರಗ ಚೆಲ್ಲಿ ಹೋಗುವುದನ್ನು ಕಂಡ ಸೂರಮ್ಮದೇವಿ ನೊಂದುಕೊಳ್ಳುತ್ತಾಳೆ. ತನ್ನೊಡನೆ ಅಣ್ಣಕಾಳಿ ನಾರಾಯಣ ಬರದೆ ಒಂಟಿಯಾಗಿ ತಾನು ಬಂದಿದ್ದರಿಂದ ಮರುಗಿ ಕಣ್ಣೀರಿಡುತ್ತಾಳೆ.

ಸಂಕ್ರಾಂತಿ ಹಬ್ಬದ ಆಚರಣೆಯ ಹುಟ್ಟನ್ನು ತಿಳಿಸುವ ಸಂಗತಿ ಬರುತ್ತದೆ. ತಿಪರೇಸೂರ ತನ್ನ ಏಳು ಹೆಣ್ಣು ಮಕ್ಕಳಿಗೆ ಒಂದೇ ಮನೆಯ ಏಳು ಜನ ಅಣ್ಣ ತಮ್ಮಂದಿರನ್ನು ವರಗಳನ್ನಾಗಿ ಹುಡುಕಲು ಹೊರಡುತ್ತಾನೆ. ಹೊಳೆಯ ದಡದಲ್ಲಿ ಕುಳಿತು ತಂದ ಬುತ್ತಿ ಉಣ್ಣುತ್ತಾನೆ. ಅಂದು ಸಂಕ್ರಾಂತಿ ಆಗುತ್ತದೆ. ಆದರೆ ಅದೇ ಹೊಳೆಯದಡಕ್ಕೆ ತನ್ನ ಏಳು ಹೆಣ್ಣು ಮಕ್ಕಳನ್ನು ಕರೆದುಕೊಂಡು ಬಂದು ವರಗಳನ್ನು ನೋಡಲು ಹೋಗುವ ಮುನ್ನ ಸ್ನಾನ ಮಾಡುವಂತೆ ಮಕ್ಕಳಿಗೆ ಹೇಳಿ, ಅವರು ಹೊಳೆಯ ಸುಳಿಯಲ್ಲಿ ಸಿಕ್ಕು ಜಲಸಮಾಧಿಯಾಗುವಂತೆ ಮಾಡುತ್ತಾನೆ. ಆದರೆ ಕೊನೆಯ ಮಗಳಾದ ಕಮಲಾದೇವಿ ಬದುಕಿ ಉಳಿಯುತ್ತಾಳೆ. ಉಳಿದ ಹಿರಿಯ ಆರು ಮಂದಿ ನೀರು ಪಾಲಾಗುತ್ತಾರೆ. ಸಂಕ್ರಾಂತಿಯ ಹುಟ್ಟಿನ ಹಿನ್ನೆಲೆಯಲ್ಲಿ ಇಂಥ ಭೀಕರ ದುರಂತದ ಚಿತ್ರ ಕಂಡು ಬರುವುದು ದುರಂತವೇ ಸರಿ.

ಕಾಳಿನಾರಾಯಣನು ಕಾಶಿಯಾತ್ರೆಗೆ ಹೋದ ಸಂದರ್ಭದಲ್ಲಿ ಒಂಬತ್ತು ತಿಂಗಳು ಶಿವನ

---

೧. ಡಾ|| ವೀರಣ್ಣದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ (೨೦೦೦) ಪುಟ ೪೪, ಸಾಲು ೨೭ - ೩೩

ಪೂಜೆ ಮಾಡಲು ಬಾಳ ಭವಮದೇವರು ನಿಯೋಜಿತನಾಗುತ್ತಾನೆ. ಶಿವನ ಇಚ್ಛೆಯಂತೆ ಬಾಳ ಭರಮನು ಜಂಬೂದ್ವೀಪಕ್ಕೆ ಹೋಗಿ ಆಗ ಬಿತ್ತಿ ಆಗಲೇ ಬೆಳೆವ ಹೂವಿನ ಗಿಡದ ಬೀಜ ತಂದು ಆ ಹೂವುಗಳಿಂದ ಶಿವನನ್ನು ಪೂಜಿಸಿದ್ದರಿಂದ ಶಿವನು ತೃಪ್ತನಾಗಿ ಇನ್ನು ಮುಂದೆ ಬೇರೆ ಯಾರಿಗೂ ಪೂಜೆಗೆ ಅವಕಾಶ ಕೊಡದೆ ಬಾಳ ಭರಮದೇವರೇ ಪೂಜೆ ಮಾಡಲೆಂದು ಹೇಳುತ್ತಾನೆ. ಆದರೆ ಕಾಳಿನಾರಾಯಣನು ಕಾಶಿಯಾತ್ರೆಯಿಂದ ಹಿಂತಿರುಗಿ ಬಂದು ಶಿವನ ನಿರ್ಧಾರವನ್ನು ಕೇಳಿ ಬಾಳಭರಮನ ಬಗ್ಗೆ ಅಸೂಯೆಪಟ್ಟು ತನ್ನ ತಂಗಿಯ ಗಂಡನಾಗಿದ್ದರೂ ಅವನಿಗೆ ಮಕ್ಕಳಿಲ್ಲದ ಕಾರಣ ಬಂಜೆಯ ಮುಖವನ್ನು ಮುಂಜಾನೆ ನೋಡುವುದು ಅಮಂಗಳವೆಂದು ತಿಳಿಸುತ್ತಾನೆ. ಕೊನೆಗೆ ಶಿವನು ಬಾಳಭರಮನ ಬದಲು ಮತ್ತೆ ಕಾಳಿನಾರಾಯಣನನ್ನೇ ಪೂಜೆಗೆ ಬರುವಂತೆ ತಿಳಿಸುತ್ತಾನೆ. ಇದರಿಂದ ಬಾಳಭರಮನ ಮನಸ್ಸಿಗೆ ನೋವಾಗುತ್ತದೆ. ಇದರಿಂದಾಗಿ ಅವನು-

ಪರಮೇಸೂರನ ವರವಿನ ಕಂದ ಬಾಳ ಭರ್ಮಯ ದೇವರ
ಮುಕ್ಕಣ್ಣ ಶಿವರಾಯನ ಸೀತಾಳ ಎಲ್ಲಿ ಚೆಲ್ಲಾಲೆ
ಹೂವ ಎಲ್ಲಿ ಚೆಲ್ಲಾಲೆ ಸೀತಾಳ ಎಲ್ಲಿ ಚೆಲ್ಲಾಲೆ
ಬಸವಣ್ಣನ ಪಾದಕಲ್ಲೇಳ ಪೂಜಿ ಮಾಡುತಾನೇನ
ಸೀತಾಳ ಹಾಕುತಾನೇನ ಹೂವ ಇಡುವುತಾನೇನ
ಬಿತ್ತಿ ಬಂದ ಎತಗೊಳಿಗಿ ಪೂಜಿ ಮಾಡುತಾನೇನ
ಪೂಜಿ ಮಾಡುತಾನೇನ ಶಾಯ ಮಾಡುತಾನೇನ
ಶಿವನ ಮಾಡಿದ ಪೂಜಿಗೆ ಬಸವಗ ಹಾಕುತಾನೇನ
ಬಸವನ ಪೂಜಿ ಮಾಡಿದರ ಕಾರುಣಿ ಆಗತಾನೇನ[೧]

ಶಿವನ ಪೂಜೆಗೆ ತಂದಿದ್ದ ಹೂವು ಮತ್ತು ನೀರನ್ನು ಬಾಳಭರಮನು ಉತ್ತು ಬಿತ್ತು ಬಂದಿದ್ದ ಎತ್ತುಗಳಿಗೆ ಹಾಕಿ ಪೂಜಿಸುತ್ತಾನೆ. ಆ ದಿನವೆ ಕಾರುಣವಿ ಹಬ್ಬವಾಗುತ್ತದೆ.

ಬೀರಪ್ಪನ ಪೂಜೆಗಾಗಿ ಖಾಸಭಾಗದ ಹೂವು ಮತ್ತು ನಾಗರಬಾವಿಯ ನೀರು ತರಲು ಗೀಜಗನಹಳ್ಳಿಗೆ ಮಾಳಿಂಗರಾಯ ಬರುತ್ತಾನೆ. ಅಲ್ಲಿ ಗುರು ಮತ್ತು ಶಿವನ ಕಾರುಣ್ಯದಿಂದ ಖಾಸಬಾಗದ ಹೂವು ಪಡೆದು ನಾಗರಬಾವಿಯ ನೀರು ತೆಗೆಯಲು ಬಾವಿಯ ಕಡೆ ಹೋಗುವಾಗ

---

೧. ಡಾ|| ವೀರಣ್ಣದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ (೨೦೦೦) ಪುಟ ೧೨೧, ಸಾಲು ೧ - ೯

ಏಳು ಹೆಡೆ ಸರ್ಪ ತಡೆಯುತ್ತದೆ. ತನಗೆ ಕಣ್ಣು ಬರಿಸಿದರೆ ದಾರಿ ಬಿಡುವುದಾಗಿ ಹೇಳಿದ್ದರಿಂದ ಮಾಳಿಂಗರಾಯನು ಭಂಡಾರ ತೆಗೆದು ಅದರ ಮೇಲೆ ಒಗೆಯುತ್ತಾನೆ. ಸರ್ಪಕ್ಕೆ ಕಣ್ಣು ಬರುತ್ತದೆ. ಆದರೆ ಸರ್ಪ ದಾರಿ ಬಿಡದೆ ಕಚ್ಚುವುದಾಗಿ ಹೇಳಿದಾಗ ಮಾಳಿಂಗರಾಯನು ಅದರ ನಾಲಿಗೆ ಸೀಳಿ ಎರಡಾಗುವಂತೆ ಮಾಡುತ್ತಾನೆ. ಅನಂತರ ನಾಗಕ್ಕೆ ನಾಗರ ಪಂಚಮಿ ಹಬ್ಬ ಕೊಟ್ಟು ಹೆಣ್ಣು ಮಕ್ಕಳು ಹಾಲೆರೆದು ಪೂಜಿಸುತ್ತಾರೆಂದು ಹೇಳಿದ ಮೇಲೆ ಮಾಳಿಂಗರಾಯನಿಗೆ ನೀರು ತೆಗೆಯಲು ದಾರಿ ಬಿಟ್ಟು ಕೊಟ್ಟಿತು.

ಹಾಲು ಮತ ಕಾವ್ಯವು ಕುರುಬ ಜನಾಂಗದ ಉಗಮ ಮತ್ತು ವಿಕಾಸವನ್ನು ನಿರೂಪಿಸುತ್ತಾ ಸಂಸ್ಕೃತಿ ಬೆಳೆದು ಬಂದುದನ್ನು ತಿಳಿಸುತ್ತದೆ. ಸಂಕ್ರಾಂತಿ, ಎಳ್ಳಮಾವಾಸ್ಯೆ, ಕಾರುಣವಿ, ನಾಗರಪಂಚಮಿ. ಹೀಗೆ ಹಬ್ಬಗಳು, ಚರಗ ಚೆಲ್ಲುವ ಆಚರಣೆಗಳು ಕಂಡು ಬರುತ್ತವೆ. ಈ ಎಲ್ಲಾ ಹಬ್ಬ ಮತ್ತು ಆಚರಣೆಗಳು ಸಂಸ್ಕೃತಿಯ ಅಂಗವಾಗಿದ್ದು ಪಶುಪಾಲನೆ, ಕೃಷಿ ಸಂಬಂಧವಾದ ನೆಲೆಯಲ್ಲಿ ಬಂದಿರುವುದನ್ನು ಕಾಣಬಹುದು.

## ೩. ವಿವಾಹ ಪ್ರಸಂಗಗಳು

ಸೃಷ್ಟಿಯ ಆದಿಯಲ್ಲಿ ಅಖಂಡೇಶ್ವರನು ತನ್ನ ಎಡಕಿನ ಫಕಡಿ ಎಲುವ ತೆಗೆದು ಮಂತ್ರಹಾಕಿದಾಗ ಆದಿಶಕ್ತಿ ರೂಪು ಪಡೆದು, ಅಖಂಡೇಶ್ವರನ ಎಡಕ್ಕೆ ನಿಂತು ಮಡದಿಯಾಗುತ್ತಾಳೆ. ಅವರು ದಂಪತಿಗಳಾದ ಚಿತ್ರವನ್ನು "ನಾರಿನಾಗಿ ನಿಂತಾಳಪ್ಪಲ್ಲಿ ಮಡದಿಯನಾಗಿ ಬಂದಾಳ" [೧] ಎಂದು ಕಾವ್ಯ ಹೇಳುತ್ತದೆ. ಮುಂದೆ ಶಿವನು ದಕ್ಷ ಬ್ರಹ್ಮನ ಮಗಳು ಪಾರ್ವತಿಯನ್ನು ವಿವಾಹವಾದದ್ದನ್ನು ಚಿತ್ರಿಸಲಾಗಿದೆ.

ಮುಕ್ಕಣ್ಣ ಶಿವರಾಯಗೆ ಪಾರ್ವತೀನ ಕೊಡುವುತಾನೇನ
ದಕ್ಷ ಬ್ರಹ್ಮನ ಮಗಳೇನ ಪಾರ್ವತಿನ ಕೊಡುವುತಾನೇನ [೨]

ಶಿವ-ಪಾರ್ವತಿಯರ ಮದುವೆಯಲ್ಲಿ ಶಾಂತಮುತ್ಯಾ ವಡ್ಡಿವಾಲಗ ಸಮೇತ ಬಂದು ಕಂಬಳಿಯನ್ನು ಮುಯ್ಯಿ ಮಾಡಿದುದಾಗಿ ಹೇಳಲಾಗಿದೆ.

ಶಾಂತ ಮುತ್ಯಾನಲ್ಲಪ್ಪ ವಡ್ಡಿವಾಲಗ ತಂದಾನ
ಮೂರಲೋಕದ ವಡಿಯಾನೆ ಮುಕ್ಕಣ್ಣ ಶಿವರಾಯಗ
ಮುಕ್ಕಣ್ಣ ಶಿವರಾಯಗ ಕಂಬಳಿ ಅಯ್ಯಾರ ಮಾಡ್ಯಾನ
ಕಂಬಳಿ ಅಯ್ಯಾರಿ ಮಾಡ್ಯಾನ ಹವಳ ಮುತ್ತಿನ ಪಲ್ಲಕಿ
ಸಡಗರ ಆಳಿನ ಸಂಗಟ ವಡ್ಡಿವಾಲಗ ತಂದಾನ [೩]

ವಡ್ಡಿವಾಲಗ ಸಮೇತ ಮುತ್ತಿನ ಪಲ್ಲಕ್ಕಿ ಒಡಗೂಡಿದ ವಿವಾಹ ಸಂಬಂಧದ ಚಿತ್ರಣ ಕಂಡುಬರುತ್ತದೆ. ಕೆಲವು ಆಚರಣೆಗಳನ್ನು ಕುರಿತಂತೆ ಕಾವ್ಯದಲ್ಲಿ ವಿವರಣೆಗಳಿವೆ.

ಪಾರ್ವತಿ ಸಾಂಬನ ಲಗ್ಗನದಾಗ ಶಾಂತಮುತ್ಯಾ ಬಂದಾರ
ಕಂಬಳಿ ತಲಿಮ್ಯಾಲ ಹೊತ್ತಾನೆ ವಡ್ಡಿ ವಾಲಗ ತಂದಾನ
ವಡ್ಡಿ ವಾಲಗ ತಂದಾನೆ ಮುಕ್ಕಣ್ಣ ಶಿವರಾಯನ
ಲಗ್ಗನದೊಳಗೆ ಅಯ್ಯಾರೆ ಕಂಬಳಿ ಮಾಡುತಾನೇನ
ವಡ್ಡಿವಾಲಗ ಮಾಡ್ಯಾನೆ ಕಂಚಿನ ಕೈತಾಳ ಮಾಡ್ಯಾನ

---

೧. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ:೪, ಸಾಲು-೧೪
೨. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ:೮-೯, ಸಾಲು-೩೧, ೧
೩. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ:೯, ಸಾಲು-೨-೬

ಹಗಲ ದೀವಟಿಗಿ ಮಾಡ್ಯಾನೆ ಸಾಲಸತ್ತಿಗೆ ಮಾಡ್ಯಾನೆ

ಸಾಲಸತ್ತಿಗೆ ಮಾಡ್ಯಾನೆ ನೂರೊಂದು ಕಳಸ ಮಾಡ್ಯಾನ [೧]

ಇಲ್ಲಿ ಬರುವ ಸಂಗತಿಗಳು ವಿವಾಹ ಸಂಪ್ರದಾಯದ ಚಿತ್ರಣವಾಗಿದೆ. ಮುಂದೆ ಪದುಮಗೊಂಡನು ರಾಕ್ಷಸಿ ಬಂಧಿಸಿ ಇರಿಸಿಕೊಂಡಿದ್ದ ಜಕ್ಕಪುರದ ರಾಜನ ಮಗಳು ಶಿವಲಿಂಗಮ್ಮನನ್ನು ಕರೆದು ತಂದಾಗ ಶಿವನು ಅವರಿಗೆ ಮದುವೆ ಮಾಡಲು ನಿರ್ಧರಿಸುತ್ತಾನೆ. ಅಲ್ಲಿಗೆ ಶಿವನನ್ನು ಹುಡುಕುತ್ತಾ ಪಾರ್ವತಿ ಬರುತ್ತಾಳೆ. ಬ್ರಹ್ಮ ವಿಷ್ಣು ರುದ್ಧರ, ಮಹೇಶ್ವರ ಹೀಗೆ ಐದು ಮಂದಿ ಬರುತ್ತಾರೆ. ಎಲ್ಲರೂ ಮದುವೆಯ ವಿಧಿ ವಿಧಾನದಲ್ಲಿ ಪಾಲ್ಗೊಳ್ಳುತ್ತಾರೆ.

ಪಾರ್ವತಿ ಬರುವುತಾಳೇನ ಕಳಸ ಹಿಡಿಯುತಾಳೇನ

ನಾಲ್ಕ ಮೂಲೆಗಲ್ಲೇಳ ನಾಲ್ಕು ಮಗಿಯ ಇಟ್ಟಾರ

ನಾಲ್ಕು ಮಗಿಯ ಇದ್ದರ ಸುರಗಿ ಸುತ್ತಬೇಕಂದಾರ

ಸುರಗಿ ಸುತ್ತ ಬೇಕಂದಾರ ನೂಲುಸಿಗಲು ಇಲ್ಲೇನ

ನೂಲ ಸಿಗಲಿಲ್ಲೇಳ ಅಳ್ಳಿ ದೊರಕಲಿಲ್ಲೇನ

ಅಳ್ಳಿ ದೊರಕಲಿಲ್ಲೇನ ಕುರಿಯ ಉಣ್ಣಿ ತಂದಾರ

ಬಿರಕಿ ಮಾಡುತಾರೇನ ನೂಲ ಮಾಡುತಾರೇನ

ನೂಲ ಮಾಡುತಾರೇನ ಸುರಗಿ ಸುತ್ತುತಾರೇನ

ಶಿವಲಿಂಗಮ್ಮನ ಲಗ್ಗನಕ ಉಣ್ಣಿ ಕಂಕಣಾದವ

ಉಣ್ಣಿ ಕಂಕಣಾದವೆ ಸುರಗಿ ಸುತ್ತುತಾರೇನ

ಕೈಯಾಗೆ ಉಣ್ಣಿ ಕಟ್ಯಾನೆ ಮುಂಗೈಗೆ ಸುರಗಿ ಕಟ್ಯಾನ

ಕೈಗ ಕಟ್ಟುತಾರೇನ ತಾಯಿ ಮಕ್ಕಳು ಮಿನದಾರ

ಐದು ಮಂದಿ ಕೂಡ್ಯಾರ ಲಗ್ಗನ ಮಾಡುತಾರೇನ

ಲಗ್ಗನ ಮಾಡುತಾರೇನ ಉಣ್ಣಿಕಂಕಣಂದಾರ

ಪದುಮಾವತಿಯನಲ್ಲೇಳ ಪದುಮಗೊಂಡನಂದರ

ಶಿವಲಿಂಗಮ್ಮಗಲ್ಲೇಳ ಕಾಲುಂಗರ ಇಡುವುತಾರೇನ

---

೧. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ:೯, ಸಾಲು-೧೮-೨೩

ಕಾಲ ಪಿಲ್ಯಾನಿಟ್ಟಾರ ಕೈಗೆ ಬಳೆಯ ನಿಟ್ಟಾರ

ತಾಳಿ ಕಟ್ಟುತಾರೇನ ಮುತ್ತ ಇಡುವುತಾರೇನ

ಮದುಮಗಳ ಆಗುತಾಳೇನ ಪದುಮಗೊಂಡ ಸಂಗಟ

ಲಗ್ಗನಾಗುತಾಳ ಮುಕ್ಕಣ್ಣ ಶಿವರಾಯನ

ಜತಿಯನಾದಿರಿ ಅಂದಾನ ಜೋಡನಾದಿರಿ ಅಂದಾನ [೧]

ಐದು ಜನರ ಶಾಸ್ತ್ರ ಸಮ್ಮತ್ರ ಸಂಖ್ಯೆ, ಕಳಸ, ಕಂಕಣ ಕಟ್ಟುವಿಕೆ, ಬಳೆ, ಕಾಲುಂಗುರ ತೊಡಿಸುವಿಕೆ, ತಾಳಿ ಕಟ್ಟುವುದು - ಈ ಎಲ್ಲಾ ಪದ್ಧತಿಯ ಪ್ರಕಾರ ಪದುಮಗೊಂಡ-ಶಿವಲಿಂಗಮ್ಮರ ಮದುವೆಯನ್ನು ಶಿವನು ತನ್ನ ನೇತೃತ್ವದಲ್ಲಿ ನಡೆಸುತ್ತಾನೆ. ಕಾವ್ಯದಲ್ಲಿ ಪುನರುಕ್ತಿ ಸೇರಿ ದೀರ್ಘ ವರ್ಣನೆಯನ್ನೊಳಗೊಂಡ ಚಿತ್ರಣವಿದೆ.

ಮುದುಗೊಂಡ-ಶಿವಲಿಂಗಮ್ಮರು ಮಗ ಮಡ್ಡಪ್ಪ ನಾಲ್ಕೈದು ವರ್ಷದವನಿದ್ದಾಗ ಕಾಡಿನಲ್ಲಿ ಒಂದು ಮುಂಜಾನೆ ಮರೆತು ಹೊರಟು ಹೋಗುತ್ತಾರೆ. ಮಡ್ಡಪ್ಪ ಬೆಳಗಾದಾಗ ಎದ್ದು ಒಬ್ಬನೇ ಕಾಡಾಕಳು ಇದು ಗೌರಿ ಆಕಳ ಗುಡ್ಡಕ್ಕಕ್ಕೆ ಬಂದು ಬೆಳೆಯುತ್ತಾನೆ. ಗಾಣಿಗರ ಮಲ್ಲಪ್ಪನಿಗೆ ಆಕಳ ಹಾಲನ್ನಿತ್ತು ಸ್ನೇಹ ಉಂಟಾದ ಹಿನ್ನೆಲೆಯಲ್ಲಿ ಮಲ್ಲಪ್ಪನು ಮಡ್ಡಪ್ಪನಿಗೆ ತನ್ನ ಮಗಳು ಗಂಗಮ್ಮಳನ್ನು ವಿವಾಹ ಮಾಡಿಕೊಡುತ್ತಾನೆ. ಗಾಣಿಗ ಮಲ್ಲಪ್ಪನಿಗೆ ಮಡ್ಡಪ್ಪನು ಆಕಳುಗಳನ್ನೂ, ತನ್ನ ಕಂಬಳಿಯನ್ನೂ ಕೊಟ್ಟು ಗೌಳಿಗನನ್ನಾಗಿ ಮಾಡುತ್ತಾನೆ. ವಿವಾಹದ ಸಂದರ್ಭದ ಚಿತ್ರಣ ಕಾವ್ಯದಲ್ಲಿ ಹೀಗಿದೆ.

ಉಡುವಧೋತರ ತಂದಾನೆ ತೊಡುವ ಅಂಗಿ ತಂದಾನ

ಕೈಗಿ ಕಂಕಣ ತಂದಾನೆ ತೆಲಿಮ್ಯಾಲ ಪಟಗ ತಂದಾನೆ

ಹಂತ ಯಾಳ್ಯಾದೊಳಗೇನೆ ಯಾರು ಬರುವುತಾರೇನ

ಹಡಪದ ನಾಗಪ್ಪಣ್ಣನ ಕರಕೊಂಡು ಬರುವುತಾನೇನ

ನಬ್ಬನೆ ನವರಾತರೆ ಸಬ್ಬನೆ ಸರಹೊತ್ತೇನ

ಹಡಪದ ನಾಗಪ್ಪಣ್ಣಗ ಬಾಜ ಕೊಡಬೇಕಾದರ

ಬಾಜ ಕೊಡುವುತಾರೇನ ಒಳ್ಳೆದು ಒಳ್ಳೆದು ಅಂದಾರ

ನಬ್ಬನೆ ನವರಾತರೆ ಸಬ್ಬನೆ ಸರಹೊತ್ತೇನ

---

೧. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೩೦, ಸಾಲು- ೧-೨೩

ಗಾಣಗೇರ ಮಲ್ಲಪ್ಪನ ಮಗಳ ತಾಯಿ ಬಂದಾರ

ಮಗಳ ತಾಯಿ ಬಂದಾರ ಗಂಡನ ಕರಕೊಂಡು ಬಂದಾರ

ಊರ ಒಳಗನಲ್ಲಪ್ಪ ಗೌಡನ ಕರಕೊಂಡು ಬಂದಾರ

ಗೌಡಗ ಸುದ್ದಿ ಹೇಳ್ಯಾರ ಕರಮಣಿಕಟ್ಟತಾರೇನ

ಗಿಡದ ಬಡಕನಲ್ಲಪ್ಪ ಲಗ್ನನಾಗುತಾವೇನ [೧]

ಸರಿ ರಾತ್ರಿಯಲ್ಲಿ ಊರಗೌಡನ ಸಮ್ಮುಖದಲ್ಲಿ ಹಡಪದ ನಾಗಪ್ಪಣ್ಣನನ್ನು ಕರೆತಂದು ಮಲ್ಲಪ್ಪ ದಂಪತಿಗಳು ತಮ್ಮ ಮಗಳನ್ನು ಕಂಕಣ ಸಹಿತವಾಗಿ ಗಿಡದ ಬುಡದಲ್ಲಿ ಮಡ್ಡಪ್ಪನಿಗೆ ಲಗ್ನನ ಮಾಡಿ ಕೊಡುತ್ತಾರೆ.

ಗಂಡು-ಹೆಣ್ಣುಗಳನ್ನು ತಮ್ಮದೇ ಆದ ಪದ್ಧತಿಯೊಡನೆ ವಿವಾಹ ಮಾಡಿದ ಚಿತ್ರಣ ಇಲ್ಲೆಲ್ಲಾ ಕಂಡು ಬಂದರೆ ಮುಂದೆ ಹೆಣ್ಣನ್ನು ಗಿಡಕ್ಕೆ ಮದುವೆ ಮಾಡುವದರ ಮೂಲಕ ಸಾಂಕೇತಿಕ ವಿವಾಹವಾದದ್ದನ್ನು ಕಾವ್ಯ ಚಿತ್ರಿಸುತ್ತದೆ. ತಿಪರೇಸೂರನ ಕೊನೆಯ ಮಗಳು ಕಮಳಾದೇವಿಯನ್ನು ಶಿವನು ವಿವಾಹವಾಗಲು ಬಯಸಿ ಅವಳ ತಂದೆಯನ್ನು ಕೇಳುತ್ತಾನೆ. ಆದರೆ ತಿಪರೇಸೂರನು

ಬೂದಿ ಬಡಕ ಸನ್ಯಾಸಿ ನಿನ್ನಗ ಯಾರ ಕೊಡಬೇಕ

ನಿನ್ನಗ ಯಾರ ಕೊಡಬೇಕ ವರಗೋಳು ಇಲ್ಲೇಳಂದಾನ [೨]

ಶಿವನನ್ನು ಕಡೆಗಣಿಸಿ ನಿರಾಕರಿಸಿ ಬಿಡುತ್ತಾನೆ. ಅನಂತರ ಶಿವನು ಕಮಳಾದೇವಿಗೆ ಬ್ಯಾನೆ ಉಂಟುಮಾಡಿ, ತಾನೇ ಗುಣಪಡಿಸುವವನಂತೆ ವೇಷ ಮರೆಸಿಕೊಂಡು ಬಂದು, ಮದುವೆ ಯಾಗದವಳಿಗೆ ಔಷಧಿ ನೀಡುವುದಿಲ್ಲವೆಂದು ಹೇಳುತ್ತಾನೆ. ಅದಕ್ಕಾಗಿ ಆಗ ಬಿತ್ತಿ ಆಗಲೇ ಬೆಳೆವ ಗಿಡದೊಡನೆ ವಿವಾಹ ಮಾಡಲು ಹೇಳಿ ಬೀಜ ಕೊಡುತ್ತಾನೆ. ಇದರಿಂದ ಅವಳಿಗೆ ಗುಣವಾಗತೊಡಗುತ್ತದೆ. ಆಗ ಬಿತ್ತಿ ಆಗಲೇ ಬೆಳೆದ ಗಿಡದೊಡನೆ ಕಮಳಾದೇವಿಗೆ ವಿವಾಹ ಮಾಡುತ್ತಾರೆ. ಈ ಸಾಂಕೇತಿಕ ವಿವಾಹದಿಂದಾಗಿ ಶಿವನ ಅಂಶದಿಂದ ಕಮಳಾದೇವಿ ಗರ್ಭಿಣಿಯಾಗುವುದನ್ನು ಕಾವ್ಯ ಚಿತ್ರಿಸುತ್ತದೆ. ವಿವಾಹದ ಸಂದರ್ಭವು ಕಾವ್ಯದಲ್ಲಿ ಹೀಗೆ ಬಂದಿದೆ.

---

೧. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೪೪, ಸಾಲು - ೧-೧೩
೨. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೬೨, ಸಾಲು - ೧೭-೧೮

ಗಿಡದ ಸಂಗಟ ಲಗ್ಗನ ಬಹಳ ಚೊಲವ ಆಡಾವ

ಒಳ್ಳೆದು ಒಳ್ಳೆದು ಅಂದಾರೆ ಹಾದಿಗೆ ಹಂದರ ಹಾಕ್ಯಾರ

ಹಾದಿಗೆ ಹಂದರ ಹಾಕ್ಯಾರೆ ಬೀದಿಗ ಚಳಿಯ ಕೊಟ್ಟಾರ

ಮನಿಯ ಸಾರುಣಗಿ ಮಾಡ್ಯಾರೆ ಮನವಂದು ಮಿಸಾರ ಮಾಡ್ಯಾರ

ಕಾಲಿಗಿ ಬಳಿಯ ಹಾಕ್ಯಾರೆ ಮುಗಿಗೆ ಮುತ್ತ ತಂದಾರ

ಕೊರಳಿಗೆ ತಾಳಿ ತಂದಾರೆ ಗಿಡಕ್ಕ ಬಾಸಿಂಗ ತಂದಾರ

ಗಿಡಕ ಬಾಸಿಂಗ ಕಟ್ಯಾರೆ ನಾರಿಗೆ ತೊಂಡಿಲ ಕಟ್ಯಾರ

ಮೇಲ ಮುಸಕ ಹಾಕ್ಯಾರೆ ಬ್ರಹ್ಮಗಂಟ ಹೊಡೆದಾರ

ಬ್ರಹ್ಮಗಂಟ ಹೊಡೆದಾರೆ ಕಡಲಿ ಬ್ಯಾಳಿ ಕಟ್ಯಾರ

ಕಲ್ಲ ಸಕ್ಕರಿ ಕಟ್ಯಾರೆ ಬರ್ಹ್ಮಗಂಟ ಹೊಡೆದಾರ

ನಡುವೆ ಗಂಟನಿದ್ದಾವ ಕಡಿಗಶಲ್ಯಾ ಹೊಚ್ಯಾರ

ಮನುಷದ್ಯೆವ ಕೂಡ್ಯಾರ ಕರಮಣಿಕಟ್ಟುತಾರೇನ

ಕರಮಣಿ ಕಟ್ಟು ಯಾಳ್ಯಾಗ ಅಕ್ಕಿಕಾಳ ವಗದಾರ

ಅಕ್ಕಿಕಾಳ ವಗದಾರೆ ತಾಯಿ ತಂದಿ ವಗದಾರ

ಮಗ್ಗುಲದೊಳಗ ಗಿಡನೆ ಹಿಡಿದು ಸಾಮಧೋಮನಂದಾರ

ಸಾಮಧೋಮನಂದಾರೆ ಅಕ್ಕಿ ಕಾಳ ವಗದಾರ [೧]

ಹೀಗೆ ವಿವಾಹದ ವಿಧಿ ವಿಧಾನಗಳು ಸಾಂಗವಾಗಿ ಸಾಗಿದ್ದನ್ನು ಕಾವ್ಯ ನಿರೂಪಿಸುತ್ತಾ ಸಾಗುತ್ತದೆ. ಈ ಎಲ್ಲಾ ಆ ಜನಾಂಗದ ಪದ್ಧತಿಯ ಮೇಲೆ ಬೆಳಕು ಚೆಲ್ಲುತ್ತದೆ. ಗಂಡಿಗೆ ಬಾಸಿಂಗ ಕಟ್ಟುವಂತೆ ಹೆಣ್ಣಿಗೆ ತೊಂಡಿಲ ಕಟ್ಟುವುದು ಪದ್ಧತಿಯಾಗಿರುವುದು ಉಲ್ಲೇಖವಾಗಿದೆ. ಅಕ್ಕಮಹಾದೇವಿ ತಾನು ಶಿವನನ್ನು ಮದುವೆಯಾಗಲು ಹಸೆಮಣೆ ಏರಿದ ಮದುವಣಗಿತ್ತಿ ಎಂದು ಹೇಳುವಾಗ "ಶರಣರ ಪಾದಂಗಳೇ ತೊಂಡಿಲ ಬಾಸಿಗವೆನಗೆ" ಎಂದು ನುಡಿದಿದ್ದಾಳೆ. ಕಮಳಾದೇವಿಯ ವಿವಾಹದ ಚಿತ್ರಣವು ಶಬ್ದಚಿತ್ರದ ಮೂಲಕ ಸಹೃದಯರಿಗೆ ಕಣ್ಣಿಗೆ ಕಟ್ಟುವಂತೆ ದೃಶ್ಯೀಕರಿಸುತ್ತದೆ. ಕಾವ್ಯದ ಸರಳವಾದ ಭಾಷೆ ಪರಿಣಾಮಕಾರಿ ಎನಿಸುತ್ತದೆ.

---

೧. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೬೭, ಸಾಲು - ೧-೧೭

ಬೀರಪ್ಪನು ತನ್ನ ಸೋದರ ಮಾವನ ಮಗಳಾದ ಕನ್ನಿಕಾಮವ್ವಳನ್ನು ಮದುವೆಯಾದ ಸಂದರ್ಭವೂ ಕೂಡ ಗಿಡಕ್ಕೆ ಲಗ್ನ ಮಾಡುವ ಚಿತ್ರಣವಾಗಿದೆ. ಬೀರಪ್ಪನಿಗೆ ಮದುವೆ ಮಾಡಬೇಕೆಂಬ ನಿರ್ಧಾರವನ್ನು ಅಕ್ಕ ಮಾಯವ್ವ ಹೇಳಿದಾಗ, ಎಲ್ಲಾ ಹೆಣ್ಣುಗಳೂ ನನಗೆ ನಿನ್ನಂತೆ ಅಕ್ಕಂದಿರಾಗಿ ತೋರುವುದರಿಂದ ನನ್ನ ಸೋದರ ಸೊಸೆಯನ್ನು ಮಾತ್ರ ವಿವಾಹವಾಗಬೇಕಿದೆ, ಆದ್ದರಿಂದ ತನ್ನ ತಂದೆ ತಾಯಿ ವೃತ್ತಾಂತ ತಿಳಿಸುವಂತೆ ಬೀರಪ್ಪ ಅಕ್ಕನಿಗೆ ಹೇಳುತ್ತಾನೆ. ತನ್ನ ಸೋದರಮಾವ ಕಾಳಿನಾರಾಯಣನೆಂದೂ, ಅವನಿಗೆ ಕನ್ನಿಕಾಮವ್ವಳೆಂಬ ಮಗಳಿರುವಳೆಂದೂ ತಿಳಿದು ಆಕೆಯನ್ನು ವಿವಾಹವಾಗಲು ನಗರೀಪಟ್ಟಣಕ್ಕೆ ಹೋಗಿ ನೋಡಿ ಬರುತ್ತಾನೆ. ಆದರೆ ಕಾಳಿನಾರಾಯಣನು ಮಗಳನ್ನು ಜೋಪಾನವಾಗಿರಿಸಿ ಎಚ್ಚರದಿಂದ ನೋಡಿಕೊಳ್ಳುತ್ತಿದ್ದುದರಿಂದ ಬಳೆಗಾರನಾಗಿ ಹೋಗಿ, ಮದುವೆಯಾಗದವರಿಗೆ ತಾನು ಬಳೆ ತೊಡಿಸುವುದಿಲ್ಲವೆಂದು ಹೇಳಿ ಆಗ ಬಿತ್ತಿ ಆಗಲೇ ಬೆಳೆವ ಬೀಜ ಕೊಟ್ಟು ಅದರ ಗಿಡದೊಡನೆ ಮದುವೆ ಮಾಡಲು ಹೇಳುತ್ತಾನೆ. ಅದರಂತೆ ಇಲ್ಲಿಯೂ ಕೂಡ ಕನ್ನಿಕಾಮವ್ವಳ ಮದುವೆಯು ಗಿಡದೊಡನೆ ನಡೆಯಬೇಕಾದ ಚಿತ್ರಣವಿದೆ.

ಗಂಡಿನ ಚಾಜನಲ್ಲಪ್ಪ ಗಿಡಕೆ ಬಾಸಿಂಗ ಕಟ್ಟರೆ
ಗಿಡಕೆ ಬಾಸಿಂಗ ಕಟ್ಟರೆ ಶಲ್ಯಾ ಮುಂಡಾಸ ಮಾಡರೆ
ಧಡಿಯಾ ಧೋತರೆ ಊಡಸಾರೆ ಭಾಸಿಂಗ ಕಟ್ಟರಿ ಅಂದಾನ
ಬಾಸಿಂಗ ಕಟ್ಟರಿ ಅಂದಾನ ಗಿಡಕೆ ಕಂಕಣ ಕಟ್ಟರೆ
ಅರಿಶಿಣ ಹಚ್ಚಲಿ ಬೇಕಯ್ಯಾ ನೀರ ಹಾಕಲಿ ಬೇಕಯ್ಯಾ
ಕನ್ನೇಳಕಾಮವ್ವಗ ಮಡಿಯಾ ಉಡಸಲಿ ಬೇಕಪ್ಪ
ಮಡಿಯಾ ಉಡಸ ಯಾಳ್ಯಾಗ ಹರಿಯಾ ನೀರ ಮಿನಿಯರೆ
ಹರಿಯ ನೀರ ಮಿನಿಯರೆ ಕಾಲಿಗೆ ಕಾಲುಂಗರ ಇಡುವರೆ
ಕಾಲುಂಗರ ಇಡಬೇಕಂದಾನೆ ಕಾಲಪಿಲ್ಯ ಇಡಬೇಕ
ತಾಳಿ ಕಟ್ಟ ಬೇಕಂದಾನೆ ಮುತ್ತು ಇಡಬೇಕಂದಾನ
ಹೊತ್ತು ತರಬೇಕೆಂದಾನೆ ತಾಳಿ ತರಬೇಕೆಂದಾನೆ
ತೊಂಡಿಲ ದಂಡಿ ಕಟ್ಟರೆ ಮೇಲ ಮುಸಕ ಹಾಕರೇ

ಕನ್ನೇಳು ಕಾಮವ್ವಗ ಮೇಲ ಮುಸಕ ಹಾಕರೆ

ಬ್ರಹ್ಮಗಂಟ ಹೊಡೆಯರೇ ಕಡ್ಲಿಬ್ಯಾಳಿ ಕಟ್ಟಸರೆ

ಎಲ್ಲಾ ದಿನಸ ಕಳಸರೆ ಸ್ಯಾಸಿ ಲಗ್ಗನ ಮಾಡರೇ [೧]

ಹಿಂದಿನ ವಿಧಾನದಂತೆ ವಿವಾಹದ ಪದ್ಧತಿಯ ಚಿತ್ರಣವಿದೆ. ಜೊತೆಗೆ ಇಲ್ಲಿ ಮದುವೆ ಹೆಣ್ಣಿನ ತಲೆಯ ಮೇಲೆ ಮುಸುಕು ಹಾಕುವ ಪದ್ಧತಿಯನ್ನು ಹೇಳಲಾಗಿದೆ.

ಬೀರಪ್ಪನು ಹುಟ್ಟುವ ಮುನ್ನವೇ ಸೋದರಮಾವ ಕಾಳಿನಾರಾಯಣನು ಮಗುವನ್ನು ಕೊಲ್ಲಲು ತಂತ್ರಗಳನ್ನು ಹೆಣೆಯುವುದು ಕಾವ್ಯದಲ್ಲಿ ಚಿತ್ರಣಗೊಂಡಿದೆ. ಮಹಾಭಾರತದಲ್ಲಿ ಕಂಸನು ಕೃಷ್ಣನನ್ನು ಕೊಲ್ಲಲು ನಡೆಸಿದ ತಂತ್ರದಂತೆಯೇ ಇಲ್ಲಿಯೂ ಸೋದರಳಿಯನ ಮೇಲೆ ಸೋದರಮಾವ ಹಗೆಯನ್ನು ಸಾಧಿಸುತ್ತಾನೆ. ಈ ಜನಾಂಗದಲ್ಲಿ ಸೋದರ ಮಾವನ ಮಗಳನ್ನೇ ವಿವಾಹವಾಗುವ ಪದ್ಧತಿ ಹೆಚ್ಚಾಗಿರುವುದನ್ನು ಇದು ಸಾಂಕೇತಿಸುತ್ತದೆ. "ಕಾಡುಗೊಲ್ಲರ ಜುಂಜಪ್ಪ ಮತ್ತು ಕುರುಬರ ಹಾಲುಮತ ಇವೆರಡು ಮಹಾಕಾವ್ಯಗಳಿಗೂ ಸಮಾನವಾಗಿರುವ ಒಂದು ಅಂಶ ಕುತೂಹಲಕರವಾಗಿದೆ; ಅದೆಂದರೆ, ಎರಡೂ ಕೃತಿಗಳ ನಾಯಕರು (ಜುಂಜಪ್ಪ ಮತ್ತು ಬೀರಪ್ಪ) ತಮ್ಮ ಸೋದರ ಮಾವಂದಿರೊಡನೆ ನಡೆಸುವ ಸ್ಪರ್ಧೆ ಮತ್ತು ಹೋರಾಟ" [೨] ಎಂದು ಡಾ|| ಸಿ.ಎನ್. ರಾಮಚಂದ್ರನ್‌ರವರು ಹೇಳಿರುವುದು ಎರಡೂ ಪರಂಪರೆಯ ಕಾವ್ಯದ ನಡುವಣ ಸಾಮ್ಯತೆಯನ್ನು ತೋರುತ್ತದೆ.

ಬಾಳಭರಮದೇವರಿಗೆ ವಿವಾಹ ಮಾಡಲು ಶಿವನು ನಿರ್ಧರಿಸುತ್ತಾನೆ. ಈ ಸಂಗತಿಯನ್ನು ಕಾಳಿನಾರಾಯಣನೊಡನೆ ಚರ್ಚಿಸಿ, ಭೂಮಿಯಲ್ಲಿ ಹೆಣ್ಣು ನೋಡಲು ತಿಳಿಸುತ್ತಾನೆ. ಅದಕ್ಕಾಗಿ ನಂದಿಯನ್ನು ಮುಂದು ಮಾಡಿಕೊಂಡು ಶಿವ ಮತ್ತು ಕಾಳಿನಾರಾಯಣರು ಬರುತ್ತಾರೆ. ಕಾಳಿನಾರಾಯಣನ ನಗರೀಪಟ್ಟಣಕ್ಕೆ ಬಂದು, ನಂದಿಯನ್ನು ಮುಂದೆ ಮಾಡಿ ಅವನು ಯಾರ ಮನೆಯಂಗಳಕ್ಕೆ ಹೋಗಿ ನಿಲ್ಲುತ್ತಾನೋ ಆ ಮನೆಯ ಕನ್ಯೆಯನ್ನು ತರುವುದೆಂದು ನಿರ್ಧರಿಸಲಾಗುತ್ತದೆ. ಅನೇಕ ಬೀದಿಗಳನ್ನು ಬಳಸಿ ಬಂದ ನಂದಿ ರೈತಗೇರಿಯಲ್ಲಿ ಕಾಳಿನಾರಾಯಣನ ಮನೆಯ ಅಂಗಳದಲ್ಲಿ ನಿಲ್ಲುತ್ತಾನೆ. ಇದರಿಂದಾಗಿ ಅವನ ತಂಗಿಯಾದ ಸೂರಮ್ಮದೇವಿಯನ್ನು ಬಾಳಭರಮದೇವರಿಗೆ ತರಲು ನಿಶ್ಚಯಿಸಲಾಗುತ್ತದೆ. ಕನ್ಯೆಯನ್ನು ಗೊತ್ತು ಮಾಡುವಾಗಿನ ಸಂಪ್ರದಾಯದ ಚಿತ್ರಣ ಹೀಗಿದೆ.

---

೧. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೨೭೧-೨೭೨, ಸಾಲು - ೩೧-೩೨ ಮತ್ತು ೧ - ೧೩

೨. ಡಾ. ರಾಮಚಂದ್ರನ್ ಸಿ.ಎನ್. ಹೊಸ ಮಡಿಯ ಮೇಲೆ ಚದುರಂಗ ೨೦೦೭, ಪುಟ : ೧೩೭,೧೩೮

ಕನ್ನಾ ಗಟ್ಟಿ ಮಾಡ್ಯಾರ ಇಳಿಯಾ ಕೊಡುವುತಾರೇನ

ಅರಿಶಿಣ ಹಚ್ಚುತಾರೇನ ಉಡಿಯಾ ತುಂಬುತಾರೇನ

ಬಳಿಯಾ ಹಾಕುತಾರೇನ ಉಡಿಯಾ ತುಂಬುತಾರೇನ

ಉಡಿಯಾ ತುಂಬುತಾರೇನ ಬಟ್ಟುಂಗರ ಹಾಕುತಾರೇನ

ಬಟ್ಟುಂಗುರ ಹಾಕುತಾರೇನ ತಾವೇನು ಮಾತನಾಡ್ಯಾರ

ಶನಿವಾರ ಹೂವನಂದಾರೆ ಐತಾರ ಹಬ್ಬನಂದಾರ [೧]

ಹೀಗೆ ಉಡಿಯ ತುಂಬುವ ಶಾಸ್ತ್ರ ಮಾಡಿ, ಕನ್ಯೆಗೆ ಹಸಿರು ಬಳೆ, ಸೀರೆ, ಕಾಲಿಗೆ ಪಿಲ್ಯಾ, ಉತ್ತುತ್ತಿ ಉರಿಗೊಬ್ಬರೆ ಉಡಿಯಕ್ಕೆ ಮೊದಲಾದವುಗಳನ್ನು ನೀಡಲಾಗುತ್ತದೆ. ಶನಿವಾರ ಸಂಜೆ ಕೈಲಾಸಕ್ಕೆ ಹೋಗಿ ಬಾಳಭರಮದೇವರಿಗೆ ಮತ್ತು ಸೂರಮ್ಮದೇವಿಗೆ ರೇಷ್ಮೆ ವಸ್ತ್ರಗಳನ್ನು ತೊಡಿಸುತ್ತಾರೆ. ಅನಂತರ

ಸ್ಯಾಸಿ ಕಟ್ಟಿಗ ವೈದಾರ ದೇವರು ಕೇಳುತಾರೇನ

ದೇವರು ಕೇಳುತಾರೇನ ಘಟಕ ನೋಡುತಾರೇನ

ಐದು ಮುವತ್ತೈದರ ವ್ಯಾಳಕ ಕರಿಮಣಿಕಟ್ಟುತಾರೇನ

ಕರಿಮಣಿ ಕಟ್ಟುತಾರೇನ ಮೇಲೆ ಹಂದರ ಹಾಕ್ಯಾರ

ಹಸರ ಪತ್ತಲ ಹಾಕ್ಯಾರ ಬ್ರಹ್ಮಗಂಟ ಹಾಕ್ಯಾರ

ಸೂರಮ್ಮದೇವಿಗಲ್ಲೇಳ ಬ್ರಹ್ಮದೇವರಿಗಂದಾನ

ಬ್ರಹ್ಮದೇವರಿಗಲ್ಲಪ್ಪ ಲಗ್ಗನಾಗುತಾವೇನ [೨]

ಈ ಜನಾಂಗದ ವಿವಾಹ ಪದ್ಧತಿಯಲ್ಲಿನ ಆಚರಣೆಗಳು ಹೀಗೆ ಚಿತ್ರಣಗೊಂಡಿದೆ. ದೇವರು ಕೇಳುವ, ಗಳಿಗೆ ನೋಡುವ ಹಾಗೂ ಬೆಳಗಿನ ಜಾವ ಐದು ಮುವತ್ತೈದಕೆ ಕರಿಮಣಿ ಕಟ್ಟುವ ಮೂಲಕ ಮದುವೆ ಸಂಬಂಧವಾದ ಕ್ರಿಯೆಗಳು ಪೂರ್ಣಗೊಂಡಿದ್ದನ್ನು ಇಲ್ಲಿ ಕಾಣಬಹುದು.

ಜತ್ತು ನಾರಾಯಣಪುರದಲ್ಲಿ ಜಕ್ಕಪ್ಪರಾಯ ಮತ್ತು ಮಾಳಪ್ಪರಿಗೆ ನಡೆದ ವಿವಾಹ ಪ್ರಸಂಗದ ಚಿತ್ರಣ ಕಾವ್ಯದಲ್ಲಿ ಬಂದಿದೆ. ಜತ್ತು ನಾರಾಯಣಪುರದ ಗಂಡಿನ ಮನೆಗೆ ಹೆಣ್ಣಿನ ಕಡೆಯ ಬೀಗರು ಬಂದಾಗಿನ ಚಿತ್ರ ಹೀಗಿದೆ.

---

೧. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೮೭, ಸಾಲು - ೬ - ೧೧

೨. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೮೮, ಸಾಲು - ೧ - ೮

ರಾಜಾವಾಡ್ಯಾದ ಮುಂದೇನ ಬಣ್ಣದಗಸೀಲಿ ಬಂದಾರ

ಬಣ್ಣದಗಸೀಲಿ ಬಂದಾರೆ ಬೀಗರ ಭೆಟ್ಟಿಗೆ ಬಂದಾರ

ಕಂಬಳಿ ಹಾಕುತಾರೇನ ಮುಂದ ಹೇಳುತಾರೇನ

ಕಳಸ ಇಳುವುತಾರೇನ ಗೊಂಗಡಿ ಹಾಕುತಾರೇನ [೧]

ತದನಂತರದಲ್ಲಿ ನಡೆಯುವ ಶಾಸ್ತ್ರ ವಿಧಿ ವಿಧಾನಗಳನ್ನು ಮುಂದುವರಿಸಿ ವರ್ಣಿಸಲಾಗಿದೆ.

ಬೀಗ ಬೀಗರು ಕೂಡ್ಯಾರೆ ಹಾಡುತ ಬರುವುತಾರೇನ

ರಾಜರ ಓಣಿಲಿ ಹಾಯ್ದರೋ ಬೀದಿಗ ಚಳಿಯ ಕೊಟ್ಟಾರ

ಹರಿಯಾ ನೀರ ಬಿಡತಾರ ಹಾದಿಗ ಚಳಿಯಾ ಕುಡತಾರ

ಬಾವಿ ನೀರಿಗೆ ಹೋಗ್ಯಾರೆ ಗಂಗಾ ಬಿಂದಗಿ ತಂದಾರ

ಹರಿಯಾ ನೀರ ತಂದಾರ ಸ್ನ್ಯಾಸಿ ನಡೆಯುತಾವೇನ

ಹರಿಯಾ ನೀರ ಮಿನಿದಾರ ತಾಯಿ ಮಕ್ಕಳ ಮಿನಿದಾರ

ತಾಯಿ ಮಕ್ಕಳ ಮಿನಿದಾರ ಸ್ನ್ಯಾಸಿ ನಡಿಯುತಾವೇನ

ಸ್ನ್ಯಾಸಿ ನಡೆಯುತಾವೇನೇ ದಂಡಿಯ ಕಟ್ಟುತಾರೇನ

ಬಾಸಿಂಗ ಕಟ್ಟುತಾರೇನ ಸೆಲ್ಯಾ ಸುತ್ತುತಾರೇನ

ಬಾಕು ಬಾಯಿಗಲ್ಲೇಳ ಜಕ್ಕಪ್ಪರಾಯನಿದ್ದಾನ

ಇಬ್ಬರು ಕೂಡುತಾರೇನೆ ಲಗ್ಗನಾಗುತಾವೇನ

ಲಗ್ಗನಾಗುತಾವೇನ ಸ್ನ್ಯಾಸಿನಾಗುತಾವೇನ

ಅಣ್ಣ ಜಕ್ಕಪ್ಪರಾಯನ ಲಗ್ಗನಾಗುತಾವೇನ [೨]

ಈ ರೀತಿ ನಡೆದ ಅಣ್ಣ ಜಕ್ಕಪ್ಪರಾಯನ ಮದುವೆಯಂತೆ ತಮ್ಮ ಮಾಳಪ್ಪನ ಮದುವೆಯೂ ನಡೆಯುತ್ತದೆ. ಬೀಗರು ಹಾಡುವ ಸಂಪ್ರದಾಯ, ಕಳಸ ಪೂಜಿಸುವುದು, ಬಾವಿಯಲ್ಲಿ ನೀರು ತಂದು ಶಾಸ್ತ್ರ ನಡೆಸುವುದು ಹೀಗೆ ವಿವಾಹಕಾಲದ ಸಂಪ್ರದಾಯಗಳ ವಿವರಗಳು ಕಾವ್ಯದಲ್ಲಿ ಕಂಡುಬರುತ್ತದೆ. ವಿವಾಹದಲ್ಲಿ ಈ ಜನಾಂಗದವರು ಪುರೋಹಿತರನ್ನು ಕರೆಸಿ ಮಂತ್ರ ಹೇಳಿಸಿದ ವಿವರ ಕಂಡು ಬಂದಿಲ್ಲ ಎಂಬುದು ಗಮನಾರ್ಹವಾಗಿದೆ.

---

೧. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೩೯೭, ಸಾಲು - ೨೪-೨೮

೨. ಡಾ. ವೀರಣ್ಣ ದಂಡೆ, ಸಂ. ಜನಪದ ಹಾಲುಮತ ಮಹಾಕಾವ್ಯ, ೨೦೦೦, ಪುಟ : ೩೯೯, ಸಾಲು - ೩-೧೫

## ಈ. ಸಾಮಾಜಿಕ ಜೀವನ

ಹಾಲುಮತ ಮಹಾಕಾವ್ಯವು ಆರಂಭದಲ್ಲಿ ಒಂದು ಜನಾಂಗದ ಹಿನ್ನೆಲೆಯಲ್ಲಿ ಸೃಷ್ಟಿಯ ಬಗೆಗೆ ಹೇಳುತ್ತಾ ಸಾಮಾಜಿಕ ಜೀವನದ ಸಂಗತಿಗಳನ್ನು ಕಟ್ಟಿಕೊಡುತ್ತಾ ಸಾಗುತ್ತದೆ. ಕುರುಬ ಜನಾಂಗದ ಮೂಲ ಪುರುಷನಾದ ಶಾಂತಮುತ್ಯಾ ಕುರಿಗಳನ್ನು ಕಾಯುತ್ತಾ ತಾನು ಬೇಸರಗೊಂಡಾಗ ಬ್ರಾಹ್ಮಾದಿಗಳಿಗೆ ಕುರಿಕಾಯುವ ಕೆಲಸವನ್ನು ಹಚ್ಚುತ್ತಾನೆ.

ವೈಯ್ಯಾ ನನ್ನ ತಮ್ಮದೇರಾ ನನಗೆ ಬ್ಯಾಸರ ಆದಾವ
ನನಗೆ ಬ್ಯಾಸರಾದವೆ ಭಾಗ್ಯ ಕಾಯಲಿಬೇಕಯ್ಯ [೧]

ಈ ಮಾತು ಕುಟುಂಬದ ಯಜಮಾನ ಇತರ ಸದಸ್ಯರಿಗೆ ಕೆಲಸವನ್ನು ವರ್ಗಾಯಿಸಿ, ಕುಟುಂಬದ ಸಂಪತ್ತನ್ನು ಜೋಪಾನ ಮಾಡಲು ಹೇಳುವ ವಿವೇಕದ ನುಡಿಗಳಂತಿವೆ.

ಮುಂದೆ ಪಾರ್ವತಿ ಷಣ್ಮುಖನನ್ನು ಕಂಕುಳಲ್ಲಿ ಎತ್ತಿಕೊಂಡು ಸ್ವರ್ಗದಲ್ಲಿ ಕುರಿಕಾಯುವ ಚಿತ್ರ ಹಳ್ಳಿಗಾಡಿನ ಹೆಂಗಸು ತನ್ನ ಕುಟುಂಬದ ಜವಾಬ್ದಾರಿಯಿಂದ ನಿರ್ವಹಿಸುವ ಕಾರ್ಯದಂತೆ ತೋರುತ್ತದೆ.

ಭಾಗ್ಯ ಕಾಯಿದೇನಂದಾಳೆ ಬದುಕ ಕಾಯಿದೇನಂದಾಳ
ಮರಿಯಾ ಉಣಿಸೇನಂದಾಳೆ ಕುರಿಯಾ ನೋಡೇನಂದಾಳ
ಟೊಂಕಿಗೆ ಸೆರಗ ಸುತ್ತಾಳೆ ಏರಿಸಿಕಚ್ಚೆ ಹಾಕ್ಯಾಳ
ಲ್ಯಾವಿ ದಂಡಕೋಲ ಹಿಡಿದಾಳೆ ಭಾಗ್ಯ ಎಬಸುತಾಳೇನ
ಗಣಪತಿ ಎಂಬ ಮಗನಿಗೆ ಮನಿಯಾಗಿ ಬಿಡುವುತಾರೇನ
ಷಣ್ಮುಖನೆಂಬ ಮಗನಿಗೆ ಮಗ್ಗಲದೊಳಗೆ ಎತ್ಯಾಳ
ಈಡಬಾಗಲ ತೆರೆದಾಳೆ ಭಾಗ್ಯ ಬಯಲಿಗೆ ಬಿಟ್ಟಾಳೆ [೨]

ಇಲ್ಲಿ ಬರುವ ಚಿತ್ರವು ಕುರಿ ಕಾಯುವ ಕಾಯಕದವರ ದಿನಚರಿಯಂತೆ ಕಂಡುಬರುತ್ತದೆ.

ಮುದ್ದವ್ವ-ಮುದಗೊಂಡರ ಸಾಂಸಾರಿಕ ಚಿತ್ರಣದಲ್ಲಿ ಕಿರಿಯ ಮಗನಾದ ಪದುಮಗೊಂಡ ಏನೂ ದುಡಿಯದೆ ಕಾಲಕಳೆಯುವುದನ್ನು ಅವನ ಅಣ್ಣಂದಿರ ಹೆಂಡತಿಯರು ಸಹಿಸುವುದಿಲ್ಲ.

---

೧. ಡಾ. ವೀರಣ್ಣ ದಂಡೆ, ಸಂ. ಜ.ಹಾ.ಮ. ೨೦೦. ಪುಟ : ೧೦, ಸಾಲು : ೧೩-೧೪
೨. ಡಾ. ವೀರಣ್ಣ ದಂಡೆ, ಸಂ. ಜ.ಹಾ.ಮ. ೨೦೦. ಪುಟ : ೧೦, ಸಾಲು : ೨೩-೨೯

ಅವನ ಬಗ್ಗೆ ಅವರಾಡುವ ಮಾತುಗಳಿವು.

ಬೇಡಿದ ಉಣತಾನಲ್ಲಪ್ಪ ತೊಲಿಯ ತುಂಡನಾದನ

ತೊಲಿಯಾ ತುಂಡನಿದ್ದಾನೆ ಸುಮ್ಮನೆ ತಿರುಗೂತಾನೇನ [೧]

ಸಹಜವಾಗಿ ತೋರುವ ಮಾತುಗಳು ಸೋಮಾರಿಯಾಗಿ ತಿರುಗಾಡಿಕೊಂಡಿರುವುದನ್ನು ಆ ಸಮಾಜ ಸಹಿಸುವುದಿಲ್ಲವೆಂಬುದನ್ನ ಸೂಚಿಸತ್ತದೆ. ಅದಕ್ಕಾಗಿ ಕೊನೆಗೆ ಪದುಮಗೊಂಡನನ್ನು ಬೇರೆ ಹಾಕಿ ಬಿಡುತ್ತಾರೆ.

ಮಡ್ಡಪ್ಪನ ನಾಲ್ಕೈದು ವರ್ಷದವನಿದ್ದಾಗ ತಂದೆ-ತಾಯಿಯರಿಂದ ತಾವು ಕಲ್ಲಿನ ಡೋಣಿಗೆ ಕರೆದ ಹಾಲನ್ನು ಯಾರೋ ಕುಡಿದು ಹೋಗಿ ಗಿಡ ಹತ್ತಿ ಕುಳಿತಿರುವುದನ್ನು ಹೆಜ್ಜೆಯ ಗುರುತು ಮತ್ತು ಮನುಷ್ಯ ವಾಸನೆಯಿಂದ ಗ್ರಹಿಸುತ್ತವೆ. ಗಿಡದ ಮೇಲೆ ಕುಳಿತ ಮಡ್ಡಪ್ಪನನ್ನು ಅವು ಪತ್ತೆ ಹಚ್ಚಿ ನೋಡುವಾಗ ಮಡ್ಡಪ್ಪ ತನ್ನ ಸ್ಥಿತಿಯನ್ನು ಹೇಳಿಕೊಳ್ಳುತ್ತಾನೆ.

ತಾಯಿ ನನ್ನಗ ಇಲ್ಲವ್ವ ತಂದಿ ನನ್ನಗ ಇಲ್ಲವ್ವ

ನೀವೆ ತಾಯಿನಂದಾರ ನೀವೆ ತಂದಿನಂದಾರ

ಮೂಕಪ್ರಾಣಿ ಅಲ್ಲೇಳ ಕಿವಿಯ ಕೊಟ್ಟು ಕೇಳ್ಯಾವ

ಕಿವಿಯ ಕೊಟ್ಟು ಕೇಳ್ಯಾವೆ ತಲಿಯ ಹಾಕುತಾವೇನ

ನಮ್ಮ ಬಲ್ಲಿ ನಿದ್ದಾರೆ ನಮ್ಮನ್ನ ಕಾಯಿದನಂದಾವ [೨]

ಈ ಪ್ರಾಣಿಗಳಲ್ಲಿ ಕಂಡು ಬರುವ ದಯಾಪರತೆ ಮಾನವರಲ್ಲಿ ಅಗತ್ಯವಾಗಿ ಇರಬೇಕಾದದ್ದು. ಅಲ್ಲದೆ ಪರಸ್ಪರ ರಕ್ಷಣೆಯ ನೆಲೆಯಲ್ಲಿ ಸಾಂಘಿಕ ಬದಕಿನ ಅಗತ್ಯತೆಯನ್ನು ಇದು ತೋರಿಸಿಕೊಟ್ಟಿದೆ.

ಮಡ್ಡಪ್ಪನಿಂದಾಗಿ ಗಾಣಿಗರ ಮಲ್ಲಪ್ಪ ಬಡತನ ನೀಗಿಕೊಂಡು ಆರ್ಥಿಕವಾಗಿ ಬೆಳೆಯುತ್ತಾನೆ. ಜೊತೆಗೆ ಆತನ ಸಲಹೆಯಂತೆ ಮಲ್ಲಪ್ಪ ಗೌಳಿಗನಾಗುತ್ತಾನೆ. ಇದರಿಂದ ಸಾಮಾಜಿಕವಾಗಿಯೂ ಕೂಡ ಒಂದು ಸ್ತರ ಮೇಲೇರಿದಂತಾಗುತ್ತದೆ. ಮಲ್ಲಪ್ಪನ ವೃತ್ತಿ ಬದಲಾವಣೆ ಇಂತಹ ಪರಿವರ್ತನೆಗೆ ಕಾರಣವಾಗಿದೆಯೆಂಬುದು ಪ್ರಮುಖವಾದ ಅಂಶವಾಗಿದೆ.

ತಿಪರಂಗಿ ನಾಡಿನ ಅರಸನಾದ ತಿಪರೇಸೂರನಿಗೆ ಏಳು ಮಂದಿ ಹೆಣ್ಣು ಮಕ್ಕಳಿದ್ದು,

---

೧. ಡಾ. ವೀರಣ್ಣ ದಂಡೆ, ಸಂ. ಜ.ಹಾ.ಮ. ೨೦೦. ಪುಟ : ೧೫, ಸಾಲು : ೧೧-೧೨

೧. ಡಾ. ವೀರಣ್ಣ ದಂಡೆ, ಸಂ. ಜ.ಹಾ.ಮ. ೨೦೦. ಪುಟ : ೩೫, ಸಾಲು : ೨೩-೨೭

ಅವರಿಗೆ ವಿವಾಹ ಮಾಡಿರಲಿಲ್ಲ. ಏಳು ಮಂದಿ ಅಣ್ಣ-ತಮ್ಮಂದಿರನ್ನು ಹುಡುಕಿ ಅವರಿಗೆ ಕೊಡಲು ಆಲೋಚಿಸಿದ್ದನು. ಬೆಳೆದು ನಿಂತ ಮಕ್ಕಳು ತಮ್ಮ ಊರಿನ ವಾರಿಗೆಯ ಹೆಣ್ಣುಮಕ್ಕಳು ಮದುವೆಯಾಗಿ ಹೋಗಿರುವುದನ್ನು ಕಂಡು ನೊಂದುಕೊಂಡು ತಮ್ಮ ತಂದೆ ತಮ್ಮನ್ನು ಗೊಡ್ಡು ಕೆಡವಿದನೆಂದು ಮಾತನಾಡಿಕೊಳ್ಳುತ್ತಾರೆ. ಇದನ್ನು ತಿಳಿದ ತಂದೆ ರೋಸಿದವನಾಗಿ ಮಕ್ಕಳನ್ನು ಹೊಳೆಗೆ ತಳ್ಳುವ ಸಂಚು ರೂಪಿಸುತ್ತಾನೆ. ಏಳು ಮಂದಿ ಅಣ್ಣ-ತಮ್ಮಂದಿರಿರುವ ವರಗಳನ್ನ ನೋಡಿರುವುದಾಗಿ ನಂಬಿಸಿ, ಅಲ್ಲಿಗೆ ಹೋಗಲು ಹೊಳೆಯ ಮಾರ್ಗವಾಗಿ ಬಂದು, ಸ್ನಾನ ಮಾಡಲು ಬಲವಂತವಾಗಿ ಇಳಿಸಿ ಅವರೆಲ್ಲಾ ಸುಳಿಗೆ ಸಿಕ್ಕಿಕೊಳ್ಳವಂತೆ ಮಾಡುತ್ತಾನೆ. ಹಿರಿಯರಾದ ಆರು ಮಂದಿ ಹೆಣ್ಣು ಮಕ್ಕಳು ನೀರಿನ ಪಾಲಾಗುತ್ತಾರೆ. ಆದರೆ ಕಿರಿಯಳಾದ ಕಮಳಾದೇವಿ ಬೆನ್ನಲ್ಲಿ ಈಜಿ ಬದುಕಿ ಉಳಿಯುತ್ತಾಳೆ. ತಂದೆಯ ನಿಷ್ಕರುಣೆಯಿಂದ ಹೆಣ್ಣು ಮಕ್ಕಳ ಸಾವಿಗೆ ಕಾರಣನಾಗುತ್ತಾನೆ. ಇದು ಆ ಸಮಾಜದ ಸ್ತ್ರೀ ಶೋಷಣೆಯ ಧಾರುಣ ಚಿತ್ರಣವಾಗಿದೆ.

ಬಾಳಭರಮದೇವರಿಗೆ ಭೂಮಿಯಲ್ಲಿ ಹೆಣ್ಣು ನೋಡಲು ಶಿವನು ನಂದಿಯೊಡಗೂಡಿ ಕಾಳಿವಾರಾಯಣನ ಜೊತೆ ಬರುತ್ತಾನೆ. ನಂದಿಯು ಎಲ್ಲರಿಗಿಂತ ಹಿರಿಯನೆಂಬ ಕಾರಣಕ್ಕೆ ಅವನು ಯಾರ ಮನೆಯಂಗಳಕ್ಕೆ ಹೋಗಿ ನಿಲ್ಲುತ್ತಾನೊ ಆ ಮನೆಯ ಹೆಣ್ಣನ್ನು ಗೊತ್ತು ಮಾಡಲು ನಿಶ್ಚಯಿಸುತ್ತಾರೆ. ಇದು ಕೂಡ ಪುರುಷ ಪ್ರಧಾನ ನೆಲೆಯ ಸಮಾಜದಲ್ಲಿನ ಸ್ತ್ರೀ ಶೋಷಣೆಯಾಗಿ ಕಂಡ ಬರತ್ತದೆ.

ಕಾಳಿನಾರಾಯಣನು ತನ್ನ ತಂಗಿಯ ಗಂಡನಾದ ಬಾಳಭರಮದೇವರನ್ನ ಶಿವನು ತನ್ನ ಪೂಜೆಗೆ ಶಾಶ್ವತವಾಗಿ ನೇಮಿಸಿಕೊಂಡ ಸಂಗತಿ ತಿಳಿದಾಗ ಸಹಿಸಲಾರದೆ ಅಸೂಯೆ ಪಡುತ್ತಾನೆ ಅದಕ್ಕಾಗಿ ಆತ ಬಂಜೆಯೆಂಬುದನ್ನ ಶಿವನಿಗೆ ಮನವರಿಕೆ ಮಾಡಿ ಕೊಟ್ಟು ಮತ್ತೆ ತಾನೆ ಶಿವನನ್ನು ಪೂಜಿಸುವ ಅವಕಾಶವನ್ನು ಗಿಟ್ಟಿಸುತ್ತಾನೆ.

ಮಂಜಾಲಿ ಏಳಲಿಬಾರದ ಒಣಗಿದ ನೋಡಿಲಿಬಾರದ
ಮುಂಜಾಳಿ ಏಳಲಿಬಾರದ ಕುಳಬಾನ ನೋಡಲಿ ಬಾರದ [೧]

ಇಂತಹ ಮಾತುಗಳಲ್ಲಿ ಕಾಳಿನಾರಾಯಣನಲ್ಲಿರುವ ಸಹಮಾನವರ ಬಗೆಗಿನ ಅಸಹನೆ

---
೧. ಡಾ. ವೀರಣ್ಣ ದಂಡೆ, ಸಂ. ಜ.ಹಾ.ಮ. ೨೦೦. ಪುಟ : ೧೨೦, ಸಾಲು : ೩-೪

ಅಭಿವ್ಯಕ್ತಿಗೊಂಡಿರವುದನ್ನು ಕಾಣಬಹದು.

ಸೂರಮ್ಮದೇವಿಯು ಶಿವನ ಅನುಗ್ರಹದಿಂದ ಮಕ್ಕಳ ಭಾಗ್ಯ ಪಡೆದ ಗರ್ಭಿಣಿಯಾದಾಗ ಕಾಳಿನಾರಾಯಣನು ಗರ್ಭದಲ್ಲಿ ಶಿಶು ಬೆಳೆಯುತ್ತಿರುವಾಗಲೇ ಕೊಲ್ಲಲು ಸಂಚು ಹೂಡುತ್ತಾನೆ. ತಂಗಿಗೆ ತವರಿನ ಬುತ್ತಿ ನೀಡುವಾಗ ವಿಷ ಬೆರೆಸಿ ಕೊಲ್ಲುವ ಯತ್ನ ನಡೆಸುತ್ತಾನೆ. ಇದು ವಿಫಲವಾದಾಗ ಹೆರಿಗೆಯ ಸಂದರ್ಭಕ್ಕೆ ಸೂಲಗಿತ್ತಿಯರನ್ನು ಕಳುಹಿಸಿ ಹುಟ್ಟುವಾಗಲೇ ಮಗುವನ್ನು ಕೊಲ್ಲಿಸಲು ನೋಡುತ್ತಾನೆ. ಹೀಗೆ ಕಾಳಿನಾರಾಯಣನು ಶಿವನ ಭಕ್ತನಾಗಿ ಪೂಜಿಸುತ್ತಿದ್ದರೂ ಇಂತಹ ಹೀನ ಗುಣಗಳಿಂದ ಕೂಡಿದವನಾಗಿದ್ದಾನೆ.

ಸೂರಮ್ಮದೇವಿ ತನ್ನ ತವರಿನ ಬುತ್ತಿಯನ್ನು ಸಹಜವಾಗಿ ಬಯಸಿ ಬಳೆಗಾರನ ಮೂಲಕ ಅಣ್ಣನಿಗೆ ಹೇಳಿ ಕಳುಹಿಸತ್ತಾಳೆ. ಈ ಸಂಬಂಧವಾಗಿ ಆಕೆ ಕನಸೊಂದು ಕಾಣುತ್ತಾಳೆ. ಕನಸಿನಲ್ಲಿ ತನ್ನ ಗರ್ಭದ ಶಿಶು ಮಾತನಾಡಿ ಮುಂದಾಗಬಹುದಾದ ಸಂಗತಿಗಳ ಬಗೆಗೆ ಎಚ್ಚರಿಸುತ್ತದೆ.

ಬಾರೋ ಬಾರೋ ತಾಯವ್ವ ಅಣ್ಣ ಬರುತಾನಂದಾನ
ಎತ್ತು ಬರುತಾವಂದಾನೆ ಬುತ್ತಿ ಬರತಾವಂದಾನ
ತೌರ ಮನಿಯ ಬುತ್ತೆವ್ವ ಹಿಗ್ಗಿಲಿ ಬಿಚ್ಚಲಿ ಬ್ಯಾಡವ್ವ
ಹಿಗ್ಗಿಲಿ ಬಿಚ್ಚಲಿ ಬ್ಯಾಡವ್ವ ಬುತ್ತಿ ಗಂಟ ಬಿಚ್ಚಾಗ
ಹುರದ ಹೂರಣ ಗಡಬೇನ ಕರದ ಕರಚಿಕಾಯೇನ
ಎಳ್ಳು ಹಚ್ಚಿದ ರೊಟ್ಟೇನ ಎಣ್ಣೆ ಬದನಿಕಾಯೇನ
ತೌರಮನಿಯ ಬುತ್ತೆಂತ ಹಿಗ್ಗಿಲಿ ಉಣ್ಣಲಿ ಬ್ಯಾಡವ್ವ
ಮೊದಲಿನ ತುತ್ತ ತಾಯವ್ವ ನಾಯಿಗೆ ಹಾಕಲಿ ಬೇಕವ್ವ
ಹಿಂದಿನ ತುತ್ತ ತಾಯವ್ವ ಬೆಕ್ಕಿಗೆ ಹಾಕಲಿ ಬೇಕವ್ವ
ಮೂರನೆ ತುತ್ತ ತಾಯವ್ವ ಮನಸಿಗ ಬಂದಂಗ ಮಾಡವ್ವ
ತೌರಮನೆಯ ಸೀರೆವ್ವ ಹಿಗ್ಗಿಲಿ ಉಡುವಲಿ ಬ್ಯಾಡವ್ವ
ನಡುಮನಿ ಕಂಬಕ ಉಡಸವ್ವ ಬೆಂಕಿಹತ್ತಿದ ಯಾಳ್ಯಾಕ
ಬೆಂಕಿ ಹತ್ತಿದ ಯಾಳ್ಯಾಕ ಸೀತಾಳ ಚಿಲ್ಕಿ ಹೊಡಿಯವ್ವ

ಸೀತಾಳ ಚಿಲ್ಕಿ ಹೊಡೆದಲ್ಲಿ ತಣ್ಣಗ ಮಾಡಲಿ ಬೇಕವ್ವ
ತೌರಮನೆಯ ಕುಬುಸಂತ ಹಿಗ್ಗಿಲಿ ತೊಡುವಲಿ ಬ್ಯಾಡವ್ವ
ಹಿಗ್ಗಿಲಿ ತೊಡುವಲಿ ಬ್ಯಾಡವ್ವ ಕುಬಸದ ಗಳಗಿ ಮುರದವ್ವ
ಕುಬಸದ ಗಳಗಿ ಮುರದವ್ವ ನಾಗ ಬೋದಿಗ ಹಾಕವ್ವ
ಬೆಂಕಿ ಹತ್ತಿದ ಯಾಳ್ಯಾಕ ಸೀತಾಳ ಚಿಲ್ಕಿ ಹೊಡಿಯವ್ವ
ಸೀತಾಳ ಚಿಲ್ಕಿ ಹೊಡೆದವ್ವ ತಣ್ಣಗ ಮಾಡಲಿ ಬೇಕವ್ವ
ಹಣೆಯ ಮ್ಯಾಲಿನ ಕುಂಕುಮ ಕಟಗಿ ಕುದರಿಗ ಹಚ್ಚವ್ವ
ಹಲ್ಲಿನ ಜಾಚೀಲಿ ವೈದವ್ವ ಕಟಗಿ ಕುದರಿಗ ಹಚ್ಚವ್ವ
ಹಲ್ಲಿಗೆ ತೂತ ಬಿದ್ದಾವ ಹಣೆಗ ತೂತ ಬಿದ್ದಾವ
ಸೀತಾಳ ಚಿಲ್ಕಿ ಹೊಡಿಯವ್ವ ತಣ್ಣಗ ಮಾಡಲಿ ಬೇಕವ್ವ
ತಂಗೇಳ ಸೂರವ್ವನ ಬೆಜ್ಜರ ಹೊಡೆದ ಎದ್ದಾಳ [೧]

ಅಣ್ಣನು ಸೂರಮ್ಮದೇವಿಗಾಗಿ ತರುವ ತೌರಿನ ಬುತ್ತಿಯ ಪರಿಣಾಮ ಏನಾಗುತ್ತದೆಂಬುದನ್ನು ಈ ಕನಸು ಕಟ್ಟಿಕೊಡುತ್ತದೆ. ಜನಪದರು ಕನಸುಗಳಿಗೆ ವಿಶೇಷವಾದ ಸ್ಥಾನ ನೀಡುತ್ತಾರೆ. ಕೆಲವೊಮ್ಮೆ ಕಂಡ ಕನಸುಗಳು ಮುಂದಾಗುವ ಘಟನೆಗಳ ಮುನ್ಸೂಚನೆ ನೀಡುವುದುಂಟು. ಮನಶ್ಶಾಸ್ತ್ರೀಯ ಹಿನ್ನೆಲೆಯಲ್ಲಿ ಈ ಬಗೆಗೆ ಹೆಚ್ಚು ಹೆಚ್ಚು ಅಧ್ಯಯನ ನಡೆಯ ಬೇಕಾಗಿದೆ. ಹುಟ್ಟಲಿರುವ ಕೂಸು ಬೀರಪ್ಪ ತನ್ನ ತಾಯಿಗೆ ಕನಸಿನಲ್ಲಿ ಮುನ್ಸೂಚನೆ ನೀಡಿ ಎಚ್ಚರಿಸಿರುವುದನ್ನು ಕಾವ್ಯವು ವಿವರಿಸುತ್ತದೆ.

ಭವುಳಿನಾಡಿನ ಗೌಳಿಗರು ತಮ್ಮ ಮನೆ ದೇವತೆಯಾದ ಇಜೇರಿ ಮಲಕವ್ವನ ಕಾಟಕ್ಕೆ ಗುರಿಕಯಾಗುತ್ತಾರೆ. ತಮ್ಮ ಹಸುಗಳು ರಕ್ತ ಕರೆಯಲಾರಂಭಿಸುತ್ತವೆ. ಎಳೆಗರುಗಳಿಗೆ ಉಟುಗಿ ಬ್ಯಾನಿ ಉಂಟಾಗುತ್ತದೆ. ಕೊರವಂಜಿ ವೇಷದಲ್ಲಿ ಬಂದ ಪಾರ್ವತಿಯು ಇಜೇರಿ ಮಲಕವ್ವ ಮುನಿದಿದ್ದಾಳೆಂದೂ, ಅವಳಿಗೆ ನರಬಲಿ ನೀಡಬೇಕೆಂದೂ ಹೇಳುತ್ತಾಳೆ. ಅದರಂತೆ ಉಪಾಯ ಹೂಡಿ ಗೌಳಿಗರು ಗಾಣಿಗರ ಮಲ್ಲಣ್ಣನನ್ನು ಮಲಕವ್ವನಿಗೆ ಬಲಿ ಅರ್ಪಿಸಿ ಹಬ್ಬ ಆಚರಿಸಿ ತೃಪ್ತಿ ಪಡಿಸುತ್ತಾರೆ. ಹಸುಗಳು ನಂತರ ಯಥಾ ಪ್ರಕಾರ ಹಾಲು ಕೊಡಲಾರಂಭಿಸುತ್ತವೆ. ಆ ರಾತ್ರಿ

೧. ಡಾ. ವೀರಣ್ಣ ದಂಡೆ, ಸಂ. ಜ.ಹಾ.ಮ. ೨೦೦. ಪುಟ : ೧೪೫, ಸಾಲು : ೬-೨೯

ಹಬ್ಬದ ಸಡಗರದಲ್ಲಿ ಗೌಳಿಗರು ಇದ್ದುದರಿಂದ ತಮ್ಮ ಆಕಳು ದೊಡ್ಡಿಯಿಂದ ಹೊರಟು ಶ್ಯಾಮರಾಯನು ಮೇವಿನ ಹೊಲಕ್ಕೆ ಹೋದದ್ದು ತಿಳಿಯುವುದಿಲ್ಲ. ಅವುಗಳನ್ನು ಓಡಿಸಿದ ಶ್ಯಾಮರಾಯನ ಅವುಗಳನ್ನು ಹಿಂಬಾಲಿಸಿ ಬಂದು ಗೌಳಿಗರು ಹಬ್ಬ ಮಾಡಿರುವುದನ್ನು ಗ್ರಹಿಸಿ, ತಮ್ಮ ಅಪ್ಪಣೆ ಪಡೆಯದೆ ಹಬ್ಬ ಮಾಡಿದ್ದರ ಬಗೆಗೆ ಗದರಿಸಿ ಮಲಕವ್ವನ ಮುಂದೆ ಹಾಕಿದ್ದ ರಂಗದ ಒಂದು ಮೂಲಿ ಚಾಜ ಪಡೆದು ಹಿಂದಿರುಗತ್ತಾನೆ. ಅದನ್ನೇ ಹಿಂಬಾಲಿಸಿ ಬಂದ ಇಜಾರಿ ಮಲಕವ್ವ ಶ್ಯಾಮರಾಯನ ಆಕಳು, ಕರುಗಳನ್ನು ಕಾಡುತ್ತಾಳೆ. ಆಕಳು ರಕ್ತ ಕರೆಯುವುದನ್ನು ಕಂಡ ಶ್ಯಾಮರಾಯ ಕಂಗಾಲಾಗುತ್ತಾನೆ. ಮಲಕವ್ವನ ಕೋರಿಕೆಯ ಮೇರೆಗೆ ಮತ್ತೆ ಪಾರ್ವತಿಯು ಕೊರವಂಜಿಯಾಗಿ ಬಂದು ಮಲಕವ್ವ ದೇವತೆ ಶಿಶುಬಲಿ ಕೇಳುತ್ತಿದ್ದಾಳೆಂದ ಶ್ಯಾಮರಾಯನಿಗೆ ಹೇಳುತ್ತಾಳೆ.

ತಾಮಟಗೇರ ಹೆಣ್ಣು ಮಗಳು ತನ್ನ ಮಗುವನ್ನ ಮನೆಯ ಮುಂದೆ ಕೂರಿಸಿ ನೀರಿಗೆ ಹೋದದ್ದನ್ನು ಕಂಡ ಶ್ಯಾಮರಾಯನು ಆ ಮಗುವನ್ನು ಅಪಹರಿಸಿ ಇಜೇರಿ ಮಲಕವ್ವನಿಗೆ ಬಲಿಯರ್ಪಿಸುತ್ತಾನೆ. ಮಲ್ಲಣ್ಣನ ಬಲಿ ಮತ್ತು ಮಗುವಿನ ಬಲಿಯು ದೇವತೆಗಳ ಹೆಸರಲ್ಲಿ ನೀಡುತ್ತಿದ್ದ ನರಬಲಿಯ ಭೀಕರ ಸತ್ಯವನ್ನು ಹೇಳುತ್ತಿದೆ.

ಉಂಬಳಿಠಾಣೆಯ ವ್ಯಾಪ್ತಿಯಲ್ಲಿ ದೊಡ್ಡಿ ನಿರ್ಮಿಸಿಕೊಂಡು ಆಕಳುಗಳನ್ನು ಮತ್ತು ಎಳೆಗರಗಳನ್ನು ಶ್ಯಾಮರಾಯ ಮತ್ತು ಅಣ್ಣ ತುಕ್ಕಪ್ಪರಾಯರು ಸಲಹುತ್ತಿದ್ದರು. ಅಲ್ಲಿಗೆ ಕಳ್ಳಕಂಟಗಿ ಗ್ರಾಮದ ಏಳುನೂರು ಬೇಡರು ಬಂದು ಆಕಳುಗಳನ್ನು ಕದಿಯಲು ಯತ್ನಿಸಿದರು. ಆದರೆ ಶ್ಯಾಮರಾಯ ಮತ್ತು ತುಕ್ಕಪ್ಪರಾಯರ ಬಳಿ ಬಿಲ್ಲು ಬಾಣ ಇರುವುದನ್ನು ಕಂಡು ಹೆದರಿ ಫಲಾಯನ ಮಾಡಿದರು. ಒಂದು ದಿನ ತುಕ್ಕಪ್ಪರಾಯ ಒಬ್ಬನೆ ಚಾಣಾಕರಾಯನ ಕೋಟೆಯ ಸುತ್ತ ದನಗಳನ್ನು ಮೇಯಿಸತ್ತಿರುವಾಗ ಹೊಂಚು ಹಾಕಿ ಕಾದಿದ್ದ ಬೇಡರು ಮುತ್ತಿಗೆ ಹಾಕಲು ಬಂದರು. ಅದನ್ನು ನೋಡಿ ತುಕ್ಕಪ್ಪರಾಯನು ಬೇಡರ ಕೈಯಲ್ಲಿ ಸಾಯುವುದಕ್ಕಿಂತ ತಾನೆ ತನ್ನ ಎದೆಗೆ ಬಾಣ ಹೊಡೆದುಕೊಂಡು ಸಾಯಲು ನಿರ್ಧರಿಸಿ ಬಾಣ ಹೊಡೆದುಕೊಳ್ಳುತ್ತಾನೆ.

ಕೆಟ್ಟ ಬ್ಯಾಡರ ಕೈಯ್ಯಾಗೆ ಪ್ರಾಣ ಕುಡಬಾರದಂದಾನ
ನಾವೇ ಹೊಡಬಾರದಂದಾನೆ ಬಿಟ್ಟಬಿಡಬೇಕಂದಾನ

---

ಕಾಲಿನಗೆ ಪಟ್ಟಾಗಿ ಬಾಣ ಹೂಡುತಾನೇನ

ಹ್ಯಾಂಗ ಮಾಡಬೇಕೆಂದಿದ್ದ ಎಂತು ಮಾಡಬೇಕೆಂದಿದ್ದ

ತೊಗಲ ಗರಿಯ ಕಾಲಾಗೆ ನಾಡ ಪರಿಗಂದಾದೇವ

ನಾಡ ಪರಿಗಂದಾದೇವ ಅಣ್ಣ ತಮ್ಮದೇರು ಅಗಲೇವ

ಬಾಣಮೆಟ್ಟುತಾನೇನ ಎದಿಯಾಗ ಹೊಡಿಯುತಾನೇನ

ತನ್ನ ಬಾಣ ತಾನೇನ ಎದಿಯಾಗ ಹೊಡಕೊಂಡು ಕುಂತಾನ [೧]

ತುಕ್ಕಪ್ಪರಾಯನು ಹೀಗೆ ಆಲೋಚಿಸಿ ತನ್ನ ಎದೆಗೆ ಬಾಣ ಹೊಡೆದುಕೊಂಡ ಪರಿಯು ಗ್ರೀಕ್ ರುದ್ರನಾಟಕದ ಅಯಾಸ್ ತನ್ನ ಖಡ್ಗದ ಮೇಲೆ ಬಿದ್ದು ಸತ್ತಿದ್ದನ್ನು ನೆನಪಿಗೆ ತರುತ್ತದೆ.

ಅಣ್ಣ ತುಕ್ಕಪ್ಪರಾಯನ ಮರಣಾನಂತರ ಗುರುಗೋರಖನಾಥರಿಂದ ವಿದ್ಯೆ ಕಲಿತ ಶ್ಯಾಮರಾಯನು ಡಿಲ್ಲಿ ಭಾಷಾನನ್ನು ಪಗಡೆಯಾಟದಲ್ಲಿ ಸೋಲಿಸಿ ಡಿಲ್ಲಿಯ ಗದ್ದುಗೆ ಹಿಡಿಯುತ್ತಾನೆ. ಮಹಾಭಾರತದಲ್ಲಿನ ಹಾಗೂ ನಳನ ಪಗಡೆಯಾಟದಂತೆ ಇದೂ ಕೂಡ ಕಂಡು ಬರುತ್ತದೆ.

ಬೀರಪ್ಪನು ತನ್ನ ಪೂಜೆಗೆ ಖಾಸಬಾಗದ ಹೂವನ್ನು ಮತ್ತು ನಾಗರಬಾವಿಯ ನೀರನ್ನು ತರುವಂತೆ ಮಾಳಿಂಗರಾಯನು ಹೇಳುತ್ತಾನೆ. ಮಾಳಿಂಗರಾಯನು ಗುರು ಮತ್ತು ಶಿವನ ಕಾರುಣ್ಯ ಬಲದಿಂದ ಅಡ್ಡಿ ಆತಂಕಗಳನ್ನು ನಿವಾರಿಸಿಕೊಂಡು, ಪಾಂಡವರ ಆಳ್ವಿಕೆಯಲ್ಲಿದ್ದ ಗೀಜಗನಹಳ್ಳಿಯ ಖಾಸ ಭಾಗಕ್ಕೆ ಹೋಗಿ ಹೂವನ್ನು ಸಂಗ್ರಹಿಸಿ, ನೀರು ಸಂಗ್ರಹಿಸಲು ನಾಗರಬಾವಿಗೆ ಹೋಗುತ್ತಾನೆ. ಅಲ್ಲಿ ಏಳು ಹೆಡೆ ಸರ್ಪ ಅಡ್ಡಗಟ್ಟುತ್ತದೆ. ಕಣ್ಣು ಬರುವಂತೆ ಮಾಡಿದರೆ ದಾರಿ ಬಿಡವೆನೆಂದು ತಿಳಿಸಿದಾಗ ಮಾಳಿಂಗರಾಯನು ಸರ್ಪದ ಮೇಲೆ ಭಂಡಾರವನ್ನು ಒಗೆದು ಕಣ್ಣು ಬರಿಸತ್ತಾನೆ. ಆದರೆ ಸರ್ಪವು ಮತ್ತೆ ದಾರಿ ಬಿಡದೆ ಕಡಿಯವುದಾಗಿ ಹೇಳಿದಾಗ ಮಾಳಿಂಗರಾಯನು ಅದರ ನಾಲಿಗೆ ಸೀಳಾಗಿ ಎರಡಾಗವಂತೆ ಮಾಡುತ್ತಾನೆ. ನಂತರ ನಾಗನಿಗೆ ನಾಗರ ಪಂಚಮಿ ಹಬ್ಬ ಕೊಟ್ಟು ಹೆಣ್ಣು ಮಕ್ಕಳು ನಾಗನಿಗೆ ಹಾಲೆರೆದು ಪೂಜಿಸುತ್ತಾರೆಂದಾಗ ದಾರಿ ಬಿಟ್ಟು ಕೊಡುತ್ತದೆ. ಹಾವಿನ ನಾಲಿಗೆ ಏಕೆ ಸೀಳಾಗಿ ಎರಡಾಗಿದೆ ಎಂಬುದಕ್ಕೆ ಹಾಗೂ ನಾಗರ ಪಂಚಮಿ ಹಬ್ಬ ಹುಟ್ಟಿಕೊಂಡ ಬಗೆಗೆ ಈ ಕಥೆ ಹುಟ್ಟಿಕೊಂಡಂತೆ ತೋರುತ್ತದೆ.

---

೧. ಡಾ. ವೀರಣ್ಣ ದಂಡೆ, ಸಂ. ಜ.ಹಾ.ಮ. ೨೦೦. ಪುಟ : ೩೬೩, ಸಾಲು : ೮-೧೫

ಮಾಳಿಂಗರಾಯನು ಧರ್ಮರಾಯನಿಗೆ ಮುಂದಾಗುವ ಘಟನೆಗಳನ್ನು ಹೇಳಿ, ಅವನ ರಾಜ್ಯದಲ್ಲಿ ಕಲಮಾಯಿಯು ಹೊನ್ನಮ್ಮಳ ರೂಪಿನಲ್ಲಿ ಬಂದು ನಿಜವಾದ ಹೊನ್ನಮ್ಮಳನ್ನು ಮನೆಯಿಂದ ಹೊರಹಾಕಿಸುವ ಘಟನೆ ಹೇಳಿ, ಮುಂದೆ ಬಿಜ್ಜಳಂಕನು ಈ ನಾಡನ್ನು ಆಳುವಾಗ ಹೊನ್ನಮ್ಮಳಿಗೆ ನ್ಯಾಯ ದೊರಕುವ ಪರಿಯನ್ನು ವಿವರಿಸುತ್ತಾನೆ. ಅಲ್ಲದೆ ಕಲಮಾಯಿಯನ್ನು ಒಂದು ಬಾಟಲಿಯಲ್ಲಿ ಸೇರುವಂತೆ ಮಾಡಿದ ಬಿಜ್ಜಳಂಕನು ಆ ಬಾಟಲಿಯನ್ನು ಧರ್ಮರಾಯನ ಜೋಳಿಗೆಗೆ ಹಾಕುತ್ತಾನೆ. ಬಾಟಲಿಯ ಬಾಯನ್ನು ಸ್ವಲ್ಪ ತೆರೆದ ಕಾರಣ ಕಲಮಾಯಿ ಹೊರಬಂದು ಸವತೆ ಬಳ್ಳಿ ಬೆಳೆಯುತ್ತಾಳೆ. ಪಾಂಡವರು ಐದು ಸವತೆಕಾಯಿ ಕಿತ್ತು ಕೊಂಡದ್ದನ್ನು ಕಂಡು ಕಲಮಾಯಿ ತನ್ನ ಐದು ಮಕ್ಕಳನ್ನು ಒಯ್ದರೆಂದು ಶೇಖಸ್ಸೈದರಿಗೆ ದೂರು ಕೊಡುತ್ತಾಳೆ. ಪಾಂಡವರ ಜೋಳಿಗೆಯನ್ನು ನೋಡಿದಾಗ ಅಲ್ಲಿ ಸೌತೆಕಾಯಿಗಳು ಇಲ್ಲದೆ ಐದು ಮಕ್ಕಳಿರುತ್ತಾವೆ. ಇದರಿಂದಾಗಿ ಪಾಂಡವರು ವನವಾಸಕ್ಕೆ ಹೋಗುವಂತಾಗುತ್ತದೆ ಎಂಬ ಮುಂದಿನ ಸಂಗತಿಗಳನ್ನು ಮಾಳಿಂಗರಾಯನು ತಿಳಿಸುತ್ತಾನೆ. ಪಾಂಡವರ ಕಥೆ ಹಾಲುಮತದ ಕಥೆಯೊಡನೆ ಥಳಕು ಹಾಕಿಕೊಂಡಿದೆ. ಅಲ್ಲದೆ ವನವಾಸಕ್ಕೆ ಹೋಗಲು ಹಾಲುಮತ ಕಾವ್ಯದಲ್ಲಿ ಕೊಡುವ ಕಾರಣವು ವ್ಯಾಸ ಭಾರತಕ್ಕಿಂತ ಬಿನ್ನವಾಗಿದೆ ಬಹುಶಃ ಇದು ಜನಪದ ಮಹಾಭಾರತದಲ್ಲಿ ಎಲ್ಲಿಯಾದರೂ ಇದ್ದಿರಬಹುದಾದ ಸಂಗತಿಯಾಗಿರಬೇಕೆನಿಸತ್ತದೆ.

ಪದುಮಗೊಂಡನ ಮಕ್ಕಳಲ್ಲಿ ಕೆಲವರು ಕಾಡಿನಲ್ಲಿ ಉಳಿದವರಾಗಿದ್ದು, ವಿವಾಹದ ಸಂದರ್ಭದಲ್ಲಿ ಹತ್ತಿಯ ನೂಲು ಸಿಗದೆ ಕಾರಣ ಉಣ್ಣೆಯ ಕಂಕಣ ಕಟ್ಟಿದ ಕಾರಣ ಅವರು ಕಾಡು ಕುರುಬರಾಗಿ, ಉಣ್ಣೆ ಕಂಕಣದವರೆನಿಸಿಕೊಂಡರು. ಪದುಮಗೊಂಡನ ಹಿರಿಯ ಮಡದಿಯ ಸಂತತಿ ಊರಿನಲ್ಲುಳಿದು ಹತ್ತಿಕಂಕಣದವರೆನಿಸಿಕೊಂಡು ಗೊಂಡಕುರುಬರಾದರು. ಆರಂಭದಲ್ಲಿ ಕುರುಬ ಜನಾಂಗದ ನೆಲೆಯಲ್ಲಿ ಸಾಗಿದ ಕಥೆ ಅಂತ್ಯದ ವೇಳೆಗೆ ವೀರಶೈವದ ನೆಲೆಯ ಕಡೆ ವಾಲಿದಂತೆ ಶಿವಶರಣರ ಕಥೆಗಳೊಡನೆ ಮುಂದುವರಿಯುತ್ತದೆ.

ಈ ಜನಾಂಗದವರು ಕೂಡು ಕಟುಂಬದವರಾಗಿ ಬಾಳಿದ್ದು ಕಂಡುಬರುತ್ತದೆ. ಮುದ್ದವ್ವ-ಮುದ್ದಗೊಂಡರ ಮಕ್ಕಳಾದ ಆದಿಗೊಂಡನಿಗೆ ಅರವತ್ತು ಮಕ್ಕಳು, ಅನಂತಗೊಂಡನಿಗೆ ಮೂವತ್ತು ಮಂದಿ ಮಕ್ಕಳು, ಸಿದ್ದಗೊಂಡನಿಗೆ ಇಪ್ಪತ್ತ ಮಂದಿ ಮಕ್ಕಳು, ಪದುಮಗೊಂಡನಿಗೆ ನಾಲ್ಕು ಜನ

ಮಕ್ಕಳು ಇರುತ್ತಾರೆ. ಪದಮಗೊಂಡನು ಏನೂ ಕೆಲಸ ಮಾಡುತ್ತಿಲ್ಲವೆಂಬ ಆಕ್ಷೇಪಣೆ ಹೊತ್ತಿದ್ದರಿಂದ ಹಿರಿಯರಾದ ಮೂವರು ಪದಮಗೊಂಡನನ್ನು ಬೇರೆ ಹಾಕುವುದನ್ನು ಕಾಣತ್ತೇವೆ. ಉಳಿದಂತೆ ಹಿರಿಯ ಮೂವರು ಒಟ್ಟಿಗೆ ಉಳಿಯುತ್ತಾರೆ. ಶ್ಯಾಮರಾಯ ಮತ್ತು ಅಣ್ಣ ತುಕ್ಕಪ್ಪರಾಯ, ಇವರ ಮಕ್ಕಳು ಜಕ್ಕಪ್ಪ, ಮಾಳಪ್ಪ ಇವರೆಲ್ಲಾ ಒಟ್ಟಾಗಿಯೇ ಬಾಳಿದವರು. ಮಾಳಪ್ಪ ಬೀರಪ್ಪನ ಶಿಷ್ಯನಾಗಿ ಹೋಗುವವರೆಗೆ ಅವರಿಬ್ಬರು ಒಟ್ಟಾಗಿ ಬಾಳಿದ್ದನ್ನು ಕಾವ್ಯ ನಿರೂಪಿಸುತ್ತದೆ.

ಹೀಗೆ ಹಾಲುಮತ ಮಹಾಕಾವ್ಯದಲ್ಲಿ ಕಂಡುಬರುವ ಕುರುಬ ಜನಾಂಗದ ಒಂದು ಸಾಮಾಜಿಕ ನೆಲೆಯನ್ನು ಗ್ರಹಿಸಬಹುದಾಗಿದೆ. ಜನಾಂಗದ ಮೂಲ ಪುರುಷರೆನಿಸಿಕೊಂಡವರನ್ನು ಚಿತ್ರಿಸುವಾಗ ಅತಿ ಮಾನುಷವಾದ ಪವಾಡಶಕ್ತಿ ಪಡೆದವರಂತೆ ಚಿತ್ರಿಸಲಾಗಿದೆ. ಇದು ಎಲ್ಲಾ ಜನಾಂಗದ ಜನಪದ ಮಹಾಕಾವ್ಯಗಳಲ್ಲಿ ಕಂಡುಬರುವ ಸಮಾನ ಸಂಗತಿಯಾಗಿದೆ.

## ೮. ಪವಾಡ ಚಿತ್ರಣಗಳು

ಹಾಲು ಮತ ಮಹಾಕಾವ್ಯವು ಇತರ ಜನಾಂಗದ ಜನಪದ ಮಹಾಕಾವ್ಯಗಳ ಹಾಗೆಯೇ ತನ್ನ ಜನಾಂಗದ ಉಗಮ, ವಿಕಾಸ, ಜನಾಂಗದ ಹುಟ್ಟಿಗೆ ಕಾರಣವಾದ ಮೂಲ-ಪುರುಷರು ಮೊದಲಾದವುಗಳನ್ನು ಪುರಾಣದ ನೆಲೆಯಲ್ಲಿ ಹೇಳುತ್ತದೆ. ಇಲ್ಲಿ ಬರುವ ಸೃಷ್ಟಿ ಪುರಾಣವೇ ಒಂದು ಅದ್ಭುತವಾದ ಕಲಾತ್ಮಕವಾದ ಚಿತ್ರಣವಾಗಿದೆ. ಆಕಾಶ, ಭೂಮಿ ಇಲ್ಲದಾಗ ನೀರೆ ನೀರಂಕಾರದೊಳಗೆ ಇದ್ದು ಇಲ್ಲದ್ಹಾಂಗ ಇರುವ ನಿರ್ಮೂಲ ಬೀಜಗಳಿಂದ ೨೧ ಲಕ್ಷ ಜೀವರಾಶಿ ಹುಟ್ಟುವುದು ವೈಜ್ಞಾನಿಕವಾದ ಅಂಶವನ್ನು ಒಳಗೊಂಡುದೇ ಆಗಿದೆ. ಅಖಂಡೇಶ್ವರನ ಸೃಷ್ಟಿಯೇ ಒಂದು ಅದ್ಭುತ ಪವಾಡವಾಗಿದೆ.

ಇಲ್ಲಿ ಬರುವ ಪಾತ್ರಗಳು ಕೆಲವು ಪೂರ್ಣ ದೇವತೆಗಳು, ಮತ್ತೆ ಕೆಲವು ಪೂರ್ಣ ಮರ್ತ್ಯ ಜೀವಿಗಳು. ಆದರೆ ಜನಾಂಗದ ಮೂಲಪುರುಷರೆನಿಸಿಕೊಂಡವರು ದೈವಾಂಶಸಂಭೂತರು. ಮುದ್ದವ್ವ-ಮುದ್ದುಗೊಂಡರ ಸೃಷ್ಟಿ ಮಣ್ಣು ಮತ್ತು ಪಾರ್ವತಿಯ ಎದೆಯ ಹಾಲಿನಿಂದ ಉಂಟಾಗುತ್ತದೆ. ಶಿವನ ಅಂಶದಿಂದ ಮರ್ತ್ಯಳಾದ ಕಮಳಾದೇವಿಯ ಉದರದಲ್ಲಿ ಜನಿಸಿದವರೇ ಬಾಳಭರಮ ದೇವರು. ಪಾರ್ವತಿಯ ಬೆವರು ಮತ್ತು ಆಕೆಯ ಮೈಯ ಮಣ್ಣಿನಿಂದ ಸೃಷ್ಟಿಗೊಂಡವನು ಅಮೋಗಿ ಸಿದ್ಧ. ಶಿವನ ಬೆವರನ್ನು ಕುಡಿದ ಫಲವಾಗಿ ಸೂರಮ್ಮದೇವಿಯ ಗರ್ಭದಲ್ಲಿ ಶಿವನೆ ಬೀರಣ್ಣನಾಗಿ ಜನಿಸುತ್ತಾನೆ. ಕೊದಲಗಿ ಕಾಡಿನಲ್ಲಿ ಶಿಶು ಬೀರಣ್ಣನ ಪೋಷಣೆಗಾಗಿ ಪಾರ್ವತಿ ತನ್ನ ಬೇವರು ಮತ್ತು ಮೈಯ ಮಣ್ಣಿನಿಂದ ಸೃಷ್ಟಿಯಾಗಿ, ಶಿವನಿಂದ ಜೀವ ಪಡೆದ ಹುಳುಗಳೆಂದರೆ ಜೇನುಹುಳುಗಳು. ಹೀಗೆ ಜೀವ ಸೃಷ್ಟಿಯ ಸಂದರ್ಭದಲ್ಲಿಯೂ ಕೂಡ ಪವಾಡ ಸದೃಶವಾದ ಸಂಗತಿಗಳೇ ಸರಮಾಲೆಯಾಗಿ ಕಾವ್ಯದಲ್ಲಿ ಪುರಾಣದ ಕಾಂತದರ್ಶಿತ್ವದಿಂದ ಕೂಡಿ ಚಿತ್ರಿತವಾಗಿವೆ.

ಬೀರಣ್ಣನು ಹುಟ್ಟಿದಾಗಲೇ ಅದ್ಭುತ ಶಕ್ತಿಯನ್ನು ಮೆರೆಯುತ್ತಾನೆ. ಹುಟ್ಟುವ ಮುನ್ನವೇ ತನ್ನ ಸೋದರ ಮಾವ ವಿಷದ ಬುತ್ತಿಯ ಮೂಲಕ ಕೊಲ್ಲಲು ಯತ್ನಿಸಿದಾಗ ಅದರ ಸೂಚನೆಯನ್ನು ಕನಸಿನ ಮೂಲಕ ತನ್ನ ತಾಯಿ ಸೂರಮ್ಮದೇವಿಗೆ ತಿಳಿಸುತ್ತಾನೆ. ಈ ಅಪಾಯದಿಂದ ತಾಯಿಯನ್ನು, ತನ್ನನ್ನೂ ರಕ್ಷಿಸಿಕೊಳ್ಳುತ್ತಾನೆ. ಹುಟ್ಟುವಾಗ ಸೂಲಗಿತ್ತಿಯರು ಉಕ್ಕಿನ ಉಗುರುಗಳಿಂದ ಚಿವುಟಿ ಕೊಲ್ಲಲು ಯತ್ನಿಸಿದಾಗ ತಾನು ಜಿಗಿದು ನಿಂತು ಅವರಿಗೆ ಒದೆ ನೀಡಿ ಓಡಿಸಿ ನಂತರ ತಾಯ

ಮಗ್ಗುಲಲ್ಲಿ ಮಗುವಾಗಿ ಮಲಗುತ್ತಾನೆ. ಹೀಗೆ ಬೀರಪ್ಪನು ಪವಾಡ ಪುರುಷನಾಗಿ, ದೈವತ್ವದ ಮಟ್ಟವನ್ನು ಏರುತ್ತಾನೆ. ತನ್ನ ಮಠಕ್ಕೆ ಬಂದು ಬೇಡಿಕೊಂಡ ಭಕ್ತರಿಗೆ ವರನೀಡುತ್ತಾನೆ. ದೈಗೊಂಡನಿಗೆ ಮತ್ತೆ ಶ್ರೀಮಂತಿಕೆ ಕರುಣಿಸುತ್ತಾನೆ. ಮಾಳಿಂಗರಾಯನನ್ನು ತನ್ನ ಶಿಷ್ಯನಾಗಿ ಪಡೆಯುತ್ತಾನೆ. ಮಾಳಿಂಗರಾಯನು ಕೂಡ ಗುರು ಮತ್ತು ಶಿವನ ಅನುಗ್ರಹದಿಂದ ಅನೇಕ ಸವಾಲುಗಳನ್ನು ಗೆದ್ದ ಚಿತ್ರ ಕಾವ್ಯದಲ್ಲಿ ಕಂಡುಬರುತ್ತದೆ. ಪಾಂಡವರಿಗೆ ಮುಂದೆ ಬರುವ ವಿಪತ್ತುಗಳ ಬಗೆಗೆ ತಿಳಿಸಿ ಎಚ್ಚರಿಸುತ್ತಾನೆ. ಹೂಗಾರ ಅಂಬಣ್ಣನಿಗೆ ಮಕ್ಕಳ ಭಾಗ್ಯ ಕೊಡುತ್ತಾನೆ.

ಅಮೋಗಿಸಿದ್ದನು ಶಿವನ ಹೆಚ್ಚಿನ ಭಕ್ತನಾಗಿದ್ದ. ಕುಂಬಾರ ಗುಂಡಯ್ಯನಿಗೆ ಮಕ್ಕಳಿಲ್ಲದ್ದರಿಂದ ಮಗನನ್ನು ಕರುಣಿಸಿದ. ಆತನೆ ಮಳಸಿದ್ಧಪನೆಂದು ಕರೆಯಲ್ಪಟ್ಟನು. ಅಗಸರ ನೀಲಮ್ಮ ತಾನು ಬಟ್ಟೆ ಒಗೆಯಲು ಹೋದಾಗ ಹಿಂದೆ ಅವಳಿಗೆ ಗೊತ್ತಿಲ್ಲದಂತೆ ಬಂದು ಮಗು ಹಳ್ಳದಲ್ಲಿ ಬಿದ್ದು ಕೊಚ್ಚಿ ಹೋಗುತ್ತದೆ. ಮೂರು ದಿನವಾದರೂ ಹುಡುಕಿ ಮಗು ಕಾಣದೆ ಅಮೋಗಿ ಸಿದ್ಧನಲ್ಲಿ ಬಂದು ಹೇಳಿಕೊಂಡಾಗ, ಹಳ್ಳಕ್ಕೆ ಹೋಗಿ ಮಗುವನ್ನು ಕರೆಯಲು ಹೇಳುತ್ತಾನೆ. ಹಾಗೆ ತಾಯಿ ಹೋಗಿ ಕರೆದ ಕೂಡಲೇ ಹಳ್ಳದ ಕಡೆಯಿಂದ ಮಗು ನಡೆದು ಬರುತ್ತದೆ.

ನಡುವಟ್ಟಿ ಗ್ರಾಮದಲ್ಲಿ ಕಟ್ಟುತ್ತಿದ್ದ ಕೆರೆಯು ಕಟ್ಟಿದ ಆರು ತಿಂಗಳಿಗೆ ಒಡೆಯುತ್ತಿತ್ತು. ಆದರೆ ಅಮೋಗಿಸಿದ್ಧನು ಅದನ್ನು ಒಡೆಯದಂತೆ ತಡೆದನು ಆದ್ದರಿಂದಲೇ ರಾಜನ ಮಗಳು ಪದ್ಮಾವತಿ ತನ್ನ ತಂದೆ ಸಾರಿಸಿದ್ದ ಕಾರಣಕ್ಕೆ ಅಮೋಗಿ ಸಿದ್ಧನನ್ನು ಹಟಮಾಡಿ ಮದುವೆಯಾದಳು. ಅಮೋಗಿ ಸಿದ್ಧ ಸನ್ಯಾಸಿಯಾಗಿ ಹೋದದ್ದರಿಂದ ಮಕ್ಕಳಿಲ್ಲದೆ ಪದ್ಮಾವತಿ ಕೊರಗುತ್ತಿದ್ದಳು. ಆಗ ಅಮೋಗಿ ಸಿದ್ಧನು ಐದು ಉತ್ತತ್ತಿ ಹಣ್ಣುಗಳನ್ನು ಮಂತ್ರಿಸಿಕೊಟ್ಟು ಒಂದು ಹೆಣ್ಣು, ನಾಲ್ಕು ಗಂಡು ಮಕ್ಕಳು ಸೃಷ್ಟಿಯಾಗುವಂತೆ ಮಾಡಿದನು. ಹೀಗೆ ರೇವಣಸಿದ್ಧ, ಸಿದ್ದರಾಮ ಶರಣರು ಪವಾಡಗಳನ್ನು ಮೆರೆದ ಯೋಗಿಗಳಾಗಿ ಕಾವ್ಯದಲ್ಲಿ ಚಿತ್ರಿತರಾಗಿದ್ದಾರೆ.

## ಊ. ಭಾಷೆ ಮತ್ತು ಛಂದಸ್ಸು

ಹಾಲುಮತ ಮಹಾಕಾವ್ಯದಲ್ಲಿ ಅದರ ಪದ್ಯರೂಪವೇ ಒಂದು ವೈಶಿಷ್ಟ್ಯತೆಯನ್ನು ಪಡೆದುಕೊಂಡಿದೆ. "ಈ ಕಾವ್ಯದ ಛಂದಸ್ಸು ಮರಾಠಿ ಲಾವಣಿಗಳ ಮತ್ತು ಇಂಗ್ಲೀಷ್ ಬೆವುಲ್ಫ್ ಕಾವ್ಯದ ಅನುಪ್ರಾಸಯುಕ್ತ ಛಂದಸ್ಸನ್ನು ಹೋಲುತ್ತದೆ" [೧]. ಎಂದು ಡಾ|| ಸಿ.ಎನ್. ರಾಮಚಂದ್ರನ್ ಅವರು ಅಭಿಪ್ರಾಯಪಡುತ್ತಾರೆ. ಇಲ್ಲಿನ ಸಾಲುಗಳು ಅಂಶಗಣಯುಕ್ತವಾಗಿವೆ. ವಿಷ್ಣುಗಣ ಪ್ರಧಾನವಾಗಿದ್ದು ಬ್ರಹ್ಮಗಣವು ವಿಷ್ಣು ಗಣವನ್ನು ಅನುಸರಿಸಿ ಲಯದ ಏರಿಳಿತಕ್ಕನುಗುಣವಾಗಿ ಬರುತ್ತದೆ. ರುದ್ರಗಣ ಅಲ್ಲಲ್ಲಿ ಕಂಡು ಬರುತ್ತಾದಾದರು ಅದನ್ನು ಸರಳವಾಗಿ ಬ್ರಹ್ಮಗಣಗಳನ್ನಾಗಿ ವಿಂಗಡಿಸಲು ಸಾಧ್ಯವಿರುತ್ತದೆ.

ಕಾವ್ಯದ ಆರಂಭದ ಕೈಲಾಸದ ಹಾಡಿಕೆಯಲ್ಲಿ ಸೃಷ್ಟಿಗೆ ಸಂಬಂಧಿಸಿದಂತೆ ಬರುವ ಈ ಸಾಲುಗಳನ್ನು ಗಮನಿಸಬಹುದು.

ನೀರೆ ನಿರಂಕಾರದೊಳಗೆ ಭೂಮಿನಾರ ಇಲ್ಲಯ್ಯ
ಆಕಾಶನಿಲ್ಲೇಳಂದಾರ ಭೂಮಿನಿಲ್ಲೇಳಂದಾರ
ನೀರೆ ನೀರಂಕಾರದೊಳಗೆ ಗಾಳಿ ಮೊದಲ ಇಲ್ಲೇನ
ನೀರೆ ನೀರಂಕಾರದೊಳಗೆ ತೆರಿಗೋಳು ಮೊದಲ ಇಲ್ಲೇನ
ತೆರಿಗೋಳು ಮೊದಲ ಇಲ್ಲೇನಪ್ಪಲಿ ನೀರ ಮ್ಯಾಲೊಂದು ಗುಳ್ಳೇನ
ನೀರಮ್ಯಾಲೆ ಗುಳ್ಳೇನಪ್ಪಲ್ಲಿ ಚೆಂಡ ಮೊದಲ ಆದವ
ಚೆಂಡ ಮೊದಲ ಆದವಪ್ಪಲ್ಲಿ ದಂಡ ಹಿಂದ ಆದವ [೨]

ಹೀಗೆ ಮೋಹಕವಾದ ದಾಟಿಯಲ್ಲಿ ಕಾವ್ಯ ಸಾಗುತ್ತದೆ. ಕಥೆ ಬೆಳೆಯುತ್ತಾ ಹೋಗುವಾಗ ಅಲ್ಲಲ್ಲಿ ಪುನರುಕ್ತಿಯಾಗುವ ಸಾಲುಗಳು ಲಯ ಬದ್ಧತೆಯಿಂದ ಕೂಡಿ ಬರುತ್ತವೆ.

ಬಾರೋ ಬಾರೋ ಮಹಾದೇವ ನಂದೊಂದು ಮಾತ ಕೇಳಯ್ಯ [೩]
ಬಾರೋ ಬಾರೋ ಶಿವರಾಯ ನಂದೊಂದು ಮಾತ ಕೇಳಯ್ಯ [೪]

---

೧. ಡಾ|| ಸಿ. ಎನ್. ರಾಮಚಂದ್ರನ್, ಹೊಸಮಡಿಯ ಮೇಲೆ ಚದುರಂಗ ೨೦೦೭, ಪುಟ ೧೩೩
೨. ಡಾ|| ವೀರಣ್ಣದಂಡೆ, (ಸಂ) ಜನಪದ ಹಾಲುಮತ ಮಹಾಕಾವ್ಯ (೨೦೦೦) ಪುಟ-೨, ಸಾಲು - ೧೫-೨೧
೩. ಡಾ|| ವೀರಣ್ಣದಂಡೆ, (ಸಂ) ಜನಪದ ಹಾಲುಮತ ಮಹಾಕಾವ್ಯ (೨೦೦೦) ಪುಟ-೧೨, ಸಾಲು - ೨೨
೪. ಡಾ|| ವೀರಣ್ಣದಂಡೆ, (ಸಂ) ಜನಪದ ಹಾಲುಮತ ಮಹಾಕಾವ್ಯ (೨೦೦೦) ಪುಟ-೧೩, ಸಾಲು - ೧೫

ಬಾರೋ ಬಾರೋ ನನ್ನಪ್ಪ ಬಂದ ಕಾರಣ ಹೇಳಯ್ಯ

ಬಂದ ಕಾರಣ ಹೇಳಪ್ಪ ಹೋಗ ಕಾರಣ ಹೇಳಯ್ಯ [೧]

ಸ್ಥೂಲವಾಗಿ ಕಾವ್ಯ ಛಂದಸ್ಸಿನ ಸ್ವರೂಪವನ್ನು ಹೀಗೆ ಗುರುತಿಸಬಹುದು. ಪ್ರತಿ ಸಾಲಿನಲ್ಲೂ ಆರು ಅಂಶಗಣಗಳು ಬರುತ್ತವೆ.

ಬಾರೋ । ಬಾರೋ । ನನ್ನಪ್ಪ । ಬಂದ । ಕಾರಣ । ಹೇಳಯ್ಯ ।

ಬಂದ । ಕಾರಣ । ಹೇಳಪ್ಪ । ಹೋಗ । ಕಾರಣ । ಹೇಳಯ್ಯ ।

ಬ್ರ. ಬ್ರ. ವಿ. ಬ್ರ. ವಿ. ವಿ

ಬ್ರ. ವಿ. ವಿ. ಬ್ರ. ವಿ. ವಿ.

ಬ್ರಹ್ಮ ಮತ್ತು ವಿಷ್ಣುಗಳು ಕಾಣಿಸಿಕೊಂಡು ವೈವಿಧ್ಯತೆಯಿಂದ ಸಾಗುತ್ತದೆ.

ಹಾಲುಮತ ಮಹಾಕಾವ್ಯದಲ್ಲಿ ಭಾಷೆ ಉತ್ತರ ಕರ್ನಾಟಕದ ಭಾಷೆಯಾಗಿದ್ದರೂ ತುಂಬಾ ಸರಳವಾದುದಾಗಿದೆ. ಹಾಡುಗಾರರು ಡೊಳ್ಳು ವಾದ್ಯವನ್ನು ವಿಶೇಷವಾಗಿ ಬಳಸಿಕೊಂಡು ಈ ಕಾವ್ಯವನ್ನು ಹಾಡುತ್ತಾರೆ.

---

೨. ಡಾ॥ ವೀರಣ್ಣದಂಡೆ, (ಸಂ) ಜನಪದ ಹಾಲುಮತ ಮಹಾಕಾವ್ಯ (೨೦೦೦) ಪುಟ-೧೪೦, ಸಾಲು -೧೮-೧೯

# ಅಧ್ಯಾಯ - ೫

## ಉಪಸಂಹಾರ

ಜನಪದ ಹಾಲುಮತ ಮಹಾಕಾವ್ಯವು ಇತರ ಜನಪದ ಮಹಾಕಾವ್ಯಗಳ ಹಾಗೆಯೇ ಸೃಷ್ಟಿ ಪುರಾಣವನ್ನೊಳಗೊಂಡು ಸಾಗುತ್ತದೆ. ಕುರುಬ ಜನಾಂಗದ ಹುಟ್ಟು, ಅದಕ್ಕೆ ಕಾರಣರಾದ ಮೂಲ ಪುರುಷರ ಜನನವನ್ನು ಹೇಳುತ್ತದೆ. ಶಾಂತಮುತ್ಯಾ ಕುರುಬ ಜನಾಂಗದ ಮೂಲಪುರುಷನಾಗಿದ್ದು. ಆತನಿಂದಲೇ ಕುರಿಸಾಕುವ ಕಾಯಕ ಆರಂಭಗೊಳ್ಳುತ್ತದೆ. ಇವನು ಕುರಿಯ ಉಣ್ಣೆ ಕತ್ತರಿಸಿ ಕಂಬಳಿ ನೇಯುವ ಕಲೆಗಾರಿಕೆಯನ್ನು ತೋರಿಸಿಕೊಡುತ್ತಾನೆ. ಕಂಬಳಿ ನೇಯಲುಬೇಕಾದ ಸಾಮಾನುಗಳನ್ನು ನಿರ್ಮಿಸಿಕೊಡುತ್ತಾನೆ. ಹೀಗಾಗಿ ಕುರುಬ ಜನಾಂಗದ ಪಶುಪಾಲನಾ ವೃತ್ತಿಯ ಆರಂಭದ ಮೂಲ ಪುರುಷನಾಗಿ ಶಾಂತಮುತ್ಯಾ ಕಂಡು ಬರುತ್ತಾನೆ. ಅನಂತರ ಆ ಜನಾಂಗದ ಸಾಂಸ್ಕೃತಿಕ ಹೊಣೆಗಾರಿಕೆಯನ್ನು ನಾಯಕನಾದ ಬೀರಪ್ಪ ನಿರ್ವಹಿಸುತ್ತಾನೆ.

ಹಾಲುಮತ ಕಾವ್ಯದ ಉದ್ದಕ್ಕೂ ಬರುವ ನಾಯಕರ ಜನನಕ್ಕೆ ಸಂಬಂಧಿಸಿದ ಕಥೆಗಳು ರೋಚಕವಾಗಿವೆ. ಹಾಲುಮತವೆಂದು ಹೆಸರು ಬರಲು ಕಾರಣವಾದ ಪ್ರಸಂಗವನ್ನು ಅದ್ಭುತವಾಗಿ ಬಣ್ಣಿಸಿದೆ. ಪಾರ್ವತಿಯು ತನ್ನ ಎದೆಯ ಹಾಲನ್ನು ಮಣ್ಣಿಗೆ ಸೇರಿಸಿ ಕಲೆಸಿ ಹಾಲು-ಮಣ್ಣಿನ ಮುದ್ದೆಯಿಂದ ಮಾಡಿದ ಗೊಂಬೆಗಳಿಗೆ ಜೀವ ತುಂಬಿಸಿ ಮುದ್ದವ್ವ ಮುದ್ದಗೊಂಡರನ್ನು ಸೃಷ್ಟಿಸುತ್ತಾಳೆ. ಇವರಿಗೆ ಹಾಲುಮತ ಎಂದು ಕರೆದರು. ಇವರ ಮಕ್ಕಳು ಕೃಷಿಯನ್ನು ಅವಲಂಬಿಸುತ್ತಾರೆ. ಮುದ್ದವ್ವ-ಮುದ್ದಗೊಂಡರ ಕಿರಿಯ ಮಗ ಪದುಮಗೊಂಡನು ಉಳುಮೆ ಮಾಡುವಾಗ ಪಾರ್ವತಿಯು ಕುರಿಗಳನ್ನು ಕೂಡಿಸಿ ಮುಚ್ಚಿದ್ದ ಹುತ್ತವನ್ನು ಸೀಳಿದ್ದರಿಂದ ಕುರಿಗಳು ಹೊರಬರಲಾಗಿ ಅವುಗಳನ್ನು ಕಾಯುತ್ತಾ ಕುರಿಸಾಕಣೆಯ ವೃತ್ತಿಯನ್ನು ಆರಂಭಿಸುತ್ತಾನೆ. ಇವನ ಮಕ್ಕಳಲ್ಲಿ ಕಾಡಿನಲ್ಲಿ ಉಳಿದವರು ಕಾಡು ಕುರುಬರು, ಇವರನ್ನು ಉಣ್ಣೆ ಕಂಕಣದವರೆಂದೂ, ಊರಿನಲ್ಲಿ ಉಳಿದ ಪದುಮಗೊಂಡನ ಮಕ್ಕಳನ್ನು ಗೊಂಡ ಕುರುಬರು, ಇವರನ್ನು ಹತ್ತಿ ಕಂಕಣದವರೆಂದೂ ಕರೆದರು. ಪಾರ್ವತಿಯು ಬೆವರಿನಿಂದ ಒದ್ದೆಯಾದ ತನ್ನ ಮೈಯ ಬೆವರಿನಿಂದ ಕೂಡ ಜೀವ ಸೃಷ್ಟಿ ಮಾಡಿದ ಸಂಗತಿಗಳು ಇಲ್ಲಿ ಬರುತ್ತವೆ. ಕಾವ್ಯದ ಆರಂಭದಲ್ಲಿ ಬರುವ ಸೃಷ್ಟಿ ಪುರಾಣವು ಅದ್ಭುತವಾಗಿದೆ.

ಈ ಕಾವ್ಯವನ್ನು ಸಂಪೂರ್ಣವಾಗಿ ಹಾಡಿರುವ ಕಲಾವಿದ ಸೈದಾಪುರದ ಸಿದ್ದಪ್ಪ ಮೇಟಿಯ ನೆನಪಿನ ಅಗಾಧ ಶಕ್ತಿಯು ಪ್ರಶಂಸೆಗೆ ಪಾತ್ರವಾದುದಾಗಿದೆ. ಸುಮಾರು ೨೩.೨೫೦ ಸಾಲುಗಳಿಂದ ಕೂಡಿದ ಅಂಶಗಣ ಛಂದಸ್ಸಿನ ಈ ಕಾವ್ಯವನ್ನು ಸಿದ್ದಪ್ಪನು ಸಂಗಡಿಗರೊಡನೆ ಹಾಡಿರುವುದು ಅದ್ಭುತ ಕಲೆಗಾರಿಕೆಯೆ ಸರಿ.

ಈ ಪ್ರಬಂಧದಲ್ಲಿ ಕಾವ್ಯದಲ್ಲಿನ ಸೃಷ್ಟಿ ಪುರಾಣ, ಸಾಂಸ್ಕೃತಿಕ ವಿಕಾಸ, ಜನಜೀವನದ ಸಾಮಾಜಿಕ ಚಿತ್ರಣ, ವಿವಾಹ ಹಬ್ಬಗಳ ಸಂಪ್ರದಾಯ ಮತ್ತು ಪವಾಡಗಳನ್ನು ಕುರಿತು ವಿಶ್ಲೇಷಣೆ ಮಾಡಲಾಗಿದೆ. ಆ ಮೂಲಕ ಈ ಕಾವ್ಯದಲ್ಲಿನ ಒಂದು ಜನಾಂಗದ ಉಗಮ, ಅದರ ವೃತ್ತಿ ಮತ್ತು ಜೀವನ, ಸಂಸ್ಕೃತಿಯಲ್ಲಿ ಆದ ಬೆಳವಣಿಗೆಯ ಮೇಲೆ ಬೆಳಕು ಚೆಲ್ಲುವ ಪ್ರಯತ್ನ ಮಾಡಲಾಗಿದೆ. ಈ ದಿಕ್ಕಿನಲ್ಲಿ ಈ ಕಾವ್ಯದ ಅಧ್ಯಯನಕ್ಕೆ ಇರಬೇಕಾದ ಒಳನೋಟಗಳ ಬಗೆಗೆ ಗಮನ ಹರಿಸಲು ಸಹಕಾರಿಯಾಗಿದೆ ಎಂಬುದೇ ನನ್ನ ಅನಿಸಿಕೆ. ಹಾಲುಮತ ಮಹಾಕಾವ್ಯವು ಮೌಖಿಕ ಮಹಾಕಾವ್ಯ ಪರಂಪರೆಯಲ್ಲಿ ಒಂದು ಮೈಲಿಗಲ್ಲಾಗಿದೆ.

## ಆಕರ ಗ್ರಂಥಗಳು


೧. ಡಾ|| ಕಲಬುರ್ಗಿ, ಎಂ.ಎಂ. — ಮಾರ್ಗ - (ಸಂಪುಟ-೪)
(ಸಂಶೋಧನಾ ಪ್ರಬಂಧಗಳ ಸಂಕಲನ)
ಸಪ್ನ ಬುಕ್ ಹೌಸ್, ಬೆಂಗಳೂರು. ೨೦೦೭

೨. ಪ್ರೊ. ಕಾಳೇಗೌಡ ನಾಗವಾರ (ಸಂ)
ಡಾ. ಅಂಬಳಿಕೆ ಹಿರಿಯಣ್ಣ — ಜೀಶಂಪ ಅವರ ಜಾನಪದ ಬರಹಗಳು
ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡಮಿ
ಬೆಂಗಳೂರು. ಮುದ್ರಣ : ೨೦೦೫

೩. ಡಾ. ಚಂದ್ರಶೇಖರ ಕಂಬಾರ (ಸಂ) — ಕನ್ನಡ ಜಾನಪದ ವಿಶ್ವಕೋಶ, ಸಂಪುಟ-೧
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
ಮುದ್ರಣ : ೧೯೮೫

೪. ಡಾ. ಜವರೇಗೌಡ ದೇ. (ಸಂ) — ಕನಕ ಸಾಹಿತ್ಯ ದರ್ಶನ, ಸಂಪುಟ-೧
ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು
ಮುದ್ರಣ : ೧೯೯೦

೫. ಡಾ. ಜೋಶಿ ಶಂ. ಬಾ. — ಹಾಲುಮತ - ದರ್ಶನ
ಕನ್ನಡ ವಿಶ್ವವಿದ್ಯಾಲಯ - ಹಂಪಿ
ದ್ವಿತೀಯ ಮುದ್ರಣ : ೧೯೯೭

೬. ಡಾ. ತಿಪ್ಪೇಸ್ವಾಮಿ ಜಿ. ಆರ್. — ಮೌಖಿಕ ಕಥನ
ವಿಜಯಲಕ್ಷ್ಮಿ ಪ್ರಕಾಶನ, ಮೈಸೂರು
ಮುದ್ರಣ - ೨೦೦೫

೭. ಡಾ. ದೇವೇಂದ್ರಕುಮಾರ ಹಕಾರಿ (ಸಂ) — ಜಾನಪದ ಸಾಹಿತ್ಯ ದರ್ಶನ-೯
ಕನ್ನಡ ಅಧ್ಯಯನ ಪೀಠ, ಧಾರವಾಡ
ಮುದ್ರಣ - ಮಾರ್ಚ್ ೧೯೮೯

೮. ಡಾ. ವೀರಣ್ಣದಂಡೆ (ಸಂ) — ಜನಪದ ಹಾಲುಮತ ಮಹಾಕಾವ್ಯ
ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು
ಮುದ್ರಣ -೨೦೦೦

೯. ಡಾ. ರಾಜಶೇಖರ ಪಿ. ಕೆ. — ಜಾನಪದ ಸಂಭ್ರಮ
ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು
ಮುದ್ರಣ : ೨೦೦೩

೧೦. ಡಾ. ರಾಮಚಂದ್ರನ್ ಸಿ. ಎನ್. — ಹೊಸ ಮಡಿಯ ಮೇಲೆ ಚದುರಂಗ
ಸಪ್ನ ಬುಕ್ ಹೌಸ್, ಬೆಂಗಳೂರು
ಮುದ್ರಣ : ೨೦೦೭

೧೧. ಪರಮೇಶ (ಸಂ) ಕಾಗಿನೆಲೆ ಸಂಪುಟ -೧
ಕಾಗಿನೆಲೆ ಮಹಾ ಸಂಸ್ಥಾನ ಕನಕಗುರು ಪೀಠ
ಕಾಗಿನೆಲೆ ಪ್ರಸಾರಾಂಗ, ಬೆಂಗಳೂರು.

೧೨. ಶಂಕರಾನಂದಪ್ಪ ಎನ್. ಹಾಲಮತ ಪುರಾಣ ಅಥವಾ
ಮುದ್ದಲಿಂಗೇಶ್ವರ ಚರಿತ್ರೆ
ವಿದ್ಯಾನಿಧಿ ಪ್ರಕಾಶನ, ಗದಗ

೧೩. ಡಾ. ಶ್ಯಾಂಸಿಂಗ್ ಶಶಿ (ಮೂಲ) ಭಾರತದ ಕುರುಬರು
ಡಾ. ರವಿ ಬಿ. ಕೆ. (ಅನು) ರಾಜಪರಂಪರೆಯ ಬುಡಕಟ್ಟು
ಅಂಕಿತ ಪುಸ್ತಕ
ಬೆಂಗಳೂರು. ಮುದ್ರಣ : ೨೦೦೫

೧೪. ಡಾ. ಶಂಕರನಾರಾಯಣ ತೀ.ನಂ.(ಸಂ) ಕರ್ನಾಟಕ ಜಾನಪದ ಮಹಾಕಾವ್ಯಗಳು
ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡಮಿ
ಬೆಂಗಳೂರು.
ಸಪ್ನ ಬುಕ್ ಹೌಸ್, ಬೆಂಗಳೂರು
ಮುದ್ರಣ : ೨೦೦೭

೧೫. ಡಾ. ಸುಂಕಾಪುರ ಎಂ. ಎಸ್. (ಸಂ) ಜಾನಪದ ಸಾಹಿತ್ಯ ದರ್ಶನ
ಕನ್ನಡ ಅಧ್ಯಯನ ಪೀಠ, ಧಾರವಾಡ
ಮುದ್ರಣ : ೧೯೮೦

೧೬. ಡಾ. ಸೋಮಶೇಖರ ಇಮ್ರಾಪುರ(ಸಂ) ಜನಪದ ಸಾಹಿತ್ಯ ದರ್ಶನ ೧೫
ಕನ್ನಡ ಅಧ್ಯಯನ ಪೀಠ, ಧಾರವಾಡ

---

